ಅರೆಬಾಸೆ

# ಮುಡ್ಪು

ಪೊಗ್ಗು ಮತ್ತೆ ಬೇಸಗೆ







## ಅರೆಬಾಸೆ ತಿಂಗ ಪತ್ರಿಕೆ

ವಿನೋದ್ ಮೂಡಗದ್ದೆ ಸಾರಥ್ಯಲಿ

## ಅರೆಬಾಸೆ ಮುಡ್ಪು

ಅರೆಬಾಸೆ ತಿಂಗ ಪತ್ರಿಕೆ

ಅರೆಬಾಸೆ ಕಲೆ, ಸಾಹಿತ್ಯ, ಸಂಸ್ಕೃತಿಗೊಂದು ಕೈಗನ್ನಡಿ

ಅರೆಬಾಸೆ ಉಳ್ಸಿಕೆ ನಮ್ಮೊಟ್ಟಿಗೆ ಕೈ ಜೋಡ್ಸಿ

ವಾರ್ಷಿಕ ಚಂದಾ ರೂ.300/-

ಹೆಚ್ಚಿನ ಮಾಹಿತಿಗೆ ಸಂಪರ್ಕಿಸಿ 9535615759 / 8971066293




ಹತ್ತು ಕುಟುಂಬ ಹದಿನೆಂಟು ಗೋತ್ರದ ಬಾಂಧವರೆ,

ಮದ್ವೆ ಆಕೆ ಹೈದ ಗೂಡೆನ ಹುಡ್ಕಿ ಹುಡ್ಕಿ ಸಾಕಾಗಿದ್ರೆ ಇಲ್ಲಿಗೊಮ್ಮೆ ಫೋನಾಯಿಸಿ ನೋಡಿ.

# ಅಕ್ಷಯ ಮ್ಯಾಟ್ರಿಮೋನಿಯಲ್

ವಧುವರರ ಅನ್ವೇಷನೆ (ಹತ್ತು ಕುಟುಂಬ ಹದಿನೆಂಟು ಗೋತ್ರದವ್ಕೆ ಮಾತ್ರ)

ಮನೆ ಸಂಖ್ಯೆ.70 ಬಿ.ಜಿ.ಸ್ ಲೇಔಟ್, ಜಕ್ಕೂರು, ಬೆಂಗಳೂರು -64

ದೂರವಾಣಿ ಸಂಖ್ಯೆ: 9686111857





# ಇಂಜಿನೀರ್ಸ್ & ಪಾರ್ಟ್ನರ್ಸ್

ಇಂಜಿನೀಯರಿಂಗ್ ಎಕ್ಸಲೆನ್ಸ್





ಡಾಯ್ಕಿನ್ ಏರ್ ಕಂಡೀಶನರ್ಸ್ ನ ಅಧಿಕೃತ ಮಾರಾಟಗಾರರು.

ನಮ್ಮಲ್ಲಿ ಎಲ್ಲಾ ತರದ ಏ.ಸಿ ಗಳ ಮಾರಾಟ, ದುರಸ್ತಿ ಮತ್ತೆ ವಾರ್ಷಿಕ ಮೇಲುಸ್ತುವಾರಿನೂ ತಕಂಡವೆ

#1ಎ, ಸಾರಕ್ಕಿ ಕೆರೆ, 24ನೇ ಮುಖ್ಯ ರಸ್ತೆ, 18ನೇ ತಿರುವು, ರಾಯಲ್ ಶಾಲೆ ಹತ್ರ,

ಜೆ.ಪಿ ನಗರ 6ನೇ ಹಂತ, ಬೆಂಗಳೂರು-560 078

ಸಂಪರ್ಕಿಸಿ: ಚಂಡೀರ ಸಂಪತ್ ಮುದ್ದಪ್ಪ

ದೂ.ಸಂ: +91 8105828210 । ಈ ಮೇಲ್: e.n.p@outlook.com


---


ಮುದ್ರಕರು : ನೇಹಾ ಕ್ರಿಯೇಷನ್ಸ್, ಬನಶಂಕರಿ 2ನೇ ಹಂತ, ಬೆಂಗಳೂರು-70.

ಕೂಡಕಂಡಿರ ತಮ್ಮಯ್ಯ, 98453 19878, 080-26710552

**ಸಂಪಾದಕೀಯ ಮಂಡಳಿ**
**ಪ್ರಧಾನ ಸಂಪಾದಕ:**
ವಿನೋದ್ ಮೂಡಗದ್ದೆ

**ಸಂಪಾದಕ ಮಂಡಳಿ:**
ಅಮೆಮನೆ ಪಾಲಾಕ್ಷ
ಕೊಂಬಂಡ ಜೀವನ್

## ಸಂಪಾದಕೀಯ

ಮುಂಗಾರು ಕಣ್ಣಾ ಮುಚ್ಚಾಲೆ ಆಡಿಕಂಡ್ ಆಗೊಮ್ಮೆ ಈಗೊಮ್ಮೆ ಬಂದ್ ಹೋಗ್ತಾ ಇರೋ ಈ ಹೊತ್ತ್‌ಲಿ. ಊರ್‍ನ ಜನ ನಾಟಿ ಕೆಲ್ಸಲಿ ತೊಡಗಿಸಿಕಂಡೊಳ್ರಿ. ಇನ್ನ್ ದೂರದ ಊರ್‌ಲಿ ಇರ್‍ವ ಜನ ಮಳೆಚಳಿ ತೇಳದೆ ದಿನನಿತ್ಯದ ಕೆಲ್ಸಕ್ಕೆ ಅಣಿ ಆಗ್ತಾ ಇರ್‍ವರಿ. ಸಣ್ಣ ಕಣ್ಸ್ ಇಸಿಕಂಡ್ ಸುರು ಮಾಡ್ದ ಈ ಮುಡ್ಪು ಎಲ್ಲರ ಕನ್ಸ್, ಕನವರಿಕೆ ಆದ್ ಬಾಳ ಕುಸಿ ಕೊಟ್ಟದೆ. ಹಂಞ ತಾಂತ್ರಿಕ ಹಂಗೆ ವಯಕ್ತಿಕ ಕಾರಣಂದ ಒಂದು ತಿಂಗ ಮುಡ್ಪು ತಾದು ತಡ ಆತ್. ಸುಮಾರ್ ಜನ ಫೋನಾಯಿಸಿ ವಿಚಾರ್‍ಸಿದೊ.. ಮುಡ್ಪುನ ಓದೊ ವರ್ಗ ಒಂದು ಉಟ್ಟು ತ ಕೇಳಿ ಅಭಿಮಾನ ಹೆಚ್ಚಿತ್.

ನಮ್ಮಲ್ಲಿ, ನಿಮ್ಮ ನೆರೆ ಕರೆಲಿ ಸುಮಾರ್ ಜನ ಸಾಹಿತಿಗ, ಕತೆಗಾರರ್ ಇರ್‍ವೊ. ಅವರ್‍ನ ಪ್ರೋತ್ಸಾಹಿಸಿ.. ಇನ್ನ್ ಕೆಲವ್ ಜನ ನನ್ನ ಕೇಳ್ದೊ 'ನಾ ಕತೆಗಳ, ಲೇಖನಗಳ ಬರ್‍ದನೆ ಆದ್ರೆ ಅದೆಲ್ಲ ಕನ್ನಡಲೇ ಬರ್‍ದದ್' ತ.. ತೊಂದರೆ ಇಲ್ಲೆ ಕಳ್ಸಿ ಕೊಡಿ ಆ ಲೇಖನಗಳ್ನೇ ಅರೆಬಾಸೆಗೆ ತರ್ಜಿಮೆ ಮಾಡಿ ಪ್ರಕಟಿಸುವೆ.

ನಾವ್ ನಮ್ಮವ್ ಎಲ್ಲೇ ಸಿಕ್ಕರೂ ನಮ್ಮ ಭಾಷೆಲೇ ಮಾತಾಡ್ನೊ.. ಕೆಲವ್ ಬೆಂಗಳೂರಂತ ಪಟ್ಟಣಲಿ ಎಲ್ಲಾರ್ ಅರೆಬಾಸೆ ಕೆಮಿಗೆ ಬಿದ್ದರೆ.. ದೂರದ ಊರ್‍ಲಿ ನಮ್ಮವು ಒಳೊ ತ ಕುಸಿ ಪಡದೆ.. ಎಲ್ಲಿ ನಮ್ಮ ನೋಡ್ರೆ ಅವರೊಟ್ಟಿಗೆ ಅರೆಬಾಸೆ ಮಾತಾಡೊಕಲ ತೇಲೋ ಮುಜುಗರಕ್ಕೆ ತಪ್ಪಿಸಿಕಂಡವೆ.. ನಮ್ಮ ಬಾಸೆ ಯಾವ ಬಾಸೆಗಿಂತನೂ ಕಮ್ಮಿ ಇಲ್ಲೆ.. ಹೆಮ್ಮೆಂದ ಮಾತಾಡ್ನೊ... ಮುಂದಿನ ಪೀಳಿಗೆಗೆ ನಾವು ಏನು ಕೊಟ್ಟವೆನೋ ಗೊತ್ಲೆ.. ಬಾಷಾ ಶ್ರೀಮಂತಿಕೆನ ಆದರೂ ಉಳ್ಸನೊ.

ಪೊಗ್ಗು ಮತ್ತೆ ಬೇಸಗೆ ತಿಂಗಳ ಈ ಸಂಚಿಕೆ ನಿಮ್ಮ ಕೈ ಸೇರ್‍ಕನ ಆಟಿ 18 ಆಗಿದ್ದದೆ. ಆಟಿ ತಿಂಗಳ ವಿಶೇಷ, ಆಟಿ ಪಾಯಸ, ಆಟಿ ತಿಂಗಳ ವಿಶೇಷ ಅಡುಗೆಗಳ ಬಗ್ಗೆ ಗೊತ್ತಿರವ್ ಉಳ್ದ ಓದುಗರೊಟ್ಟಿಗೆ ಹಂಚಿಕಣಿ. ಏನೇ ತಪ್ಪುಗ ಇದ್ದರೂ ನೇರವಾಗಿ ನಾವ್ಗೆ ತಿಳ್ಸಿ, ತಿದ್ದಿಕಂಡ್ ಸರಿಪಡ್ಸಿಕಂಡವೆ.
ಮುಂದಿನ ಸಂಚಿಕೆಲಿ ಇನ್ನಷ್ಟ್ ವಿಷಯಗಳೊಟ್ಟಿಗೆ ಕಾಂಬೊನೊ.. ಅಲ್ಲಿ ಮುಟ್ಟ ನಿಮ್ಮ ಸಹಕಾರ ಹಿಂಗೆ ಇರ್‍ಲಿ.

**ಇಂತಿ ವಿನೋದ್**

## ಮುಡ್ಪುನ ಒಳ್ಗೆ

## ಹಳಬರ ಜೋಳಿಗೆ

### ಜಯಮ್ಮ ಚೆಟ್ಟಿಮಾಡ ಅವರ ಹಳಬರ ಜೋಳಿಗೆ ಸಂಚಿಕೆಂದ ಆರ್ಸಿದ ಕಥಾ ಮಾಲಿಕೆ–4

**4.** ಕಿಸ್ತು ಕಟ್ಟಿಕೆ ಹೊರ್‌ಡ್ತಾ ಇದ್ದ ನಮ್ಮ ತಾತನ ಶಿಸ್ತ್

**ಕತೆ ಕೊಟ್ಟವು: ಕುಕ್ಕೇಟಿ ಮಾಧವ ಗೌಡ**

ನಾನು ಆಗ ನಾಲ್ಕನೇ ತರಗತಿಲಿ ಓದ್ತಾ ಇದ್ದಂಗೆ ನೆಂಪು. ಒಂದು ಸಂಜೆ ಶಾಲೆಂದ ಮನೆಗೆ ಬಾಕನ ವಯ್ಯಸಾದ ಒಬ್ಬ ನಮ್ಮ ಮನೆಗೆ ಬಂದ್ ನಮ್ಮ ತಾತನೊಟ್ಟಿಗೆ ಏನೋ ಮಾತಾಡ್ತಾ ಇದ್ದೊ. (ಬಹುಶಃ ಅವು ಉಗ್ರಾಣಿಯವಾಗಿರಕು). ಅವ್ವ ಅವ್ಕೆ ಕುಡಿಯಕೆ ತಂದು ಕೊಟ್ಟೊ (ಹಾಲೋ, ಕಷಾಯನೋ ಇರ್ದು) ಅದ್ನ ಕುಡ್ದ್ ಅವು ತಾತಂಗೆ ವಂದಿಸಿ ಮನೆಗೆ ಹೊರ್‍ಟೊ.

ಕಡೆಗೆ ತಾತ ಅಮ್ಮನ ಕರ್‍ದ್ **"**ಕಾವೇರಿ... ನಾಳೆ ಕಿಸ್ತು ಕಟ್ಟಿಕೆ ಹೋಕೆ ಉಟ್ಟು ನನ್ನ ಬಟ್ಟೆನ ಒಗ್ದ್ ಇಸ್ತ್ರಿ ಮಾಡಿ ಇಸ್**"** ತ ಹೇಳ್ದೊ. ಹಂಗೆ ಹೇಳಿ ತಾತ ಅಡ್ಕಾರ್ ಕಡೆ ಹೊರ್‍ಟೊ.

ತಾತ ಅಮ್ಮನತ್ರ ಬಟ್ಟೆ ಒಗ್ದ್ ಇಸ್ ಕಿಸ್ತ್ ಕಟ್ಟಿಕೆ ಹೋಕು ತಾ ಹೇಳ್ದನ್ನ ಕೇಳಿ **"**ಇದೇನೋ ಒಂದು ದೊಡ್ಡ ಸಂಗತಿ ಇರಕು**"** ತ ನೆನ್ಸಿ ನಮ್ಮ ಅಪ್ಪ (ಕೊರಗಪ್ಪ ಗೌಡರು)ನಲ್ಲಿ ಕೇಳ್ದೆ... **"**ಕಿಸ್ತು ಕಟ್ಟುದು ತೇಳ್ರೆ ಎಂತ ಅಪ್ಪ? ತಾತ ಕಿಸ್ತು ಕಟ್ಟಿಕೆ ಉಟ್ಟು ಬಟ್ಟೆ ಒಗ್ದ್ ಇಸ್ ತ ಅಮ್ಮಂಗೆ ಹೇಳಿ ಹೋಗೊಳೊ**"**.

ಅಪ್ಪ ಹೇಳ್ದೊ ಕಿಸ್ತ್ ತೇಳ್ರೆ ನಮ್ಮ ಜಾಗೆನ ಭೂ ಕಂದಾಯ ಅದ್ನ ವಸೂಲು ಮಾಡಿಕೆ ಪಟೇಲರ್ ತೋಟಪ್ಪಾಡಿಗೆ (ಒಂದು ಜಾಗೆನ ಹೆಸ್ರ್) ಬಂದವೆ. ಈ ಊರ್‍ನವೆಲ್ಲಾ ನಾಳೆ ಕಂದಾಯ ಕಟ್ಟಿಕೆ ಅಲ್ಲಿಗೆ ಹೋದವೆ ಹಂಗೆನೆ ತಾತನೂ ಹೋದವೆ.

ನಾಳೆ ಕಿಸ್ತು ಕಟ್ಟಿಕೆ ಹೋಕೆ ಇರ್‍ದು.. ಆದ್ರೆ ತಾತ ಈಗ ಅಡ್ಕಾರಿಗೆ ಹೋದೊಲ

ಈ ಪ್ರಶ್ನೆಗೆ ಅಂದೇ ಉತ್ತರ ಸಿಕ್ಕಿತ್. ತಾತ ಅಡ್ಕಾರ್‌ಂದ ಬಂದಂಗೆ ಗೊತ್ತಾತ್ ಅವು ಕ್ಷೌರ ಮಾಡ್ಸಿಕೆ ಹೋದ್ ತ. ಮಾರ್‍ನೆ ದಿನ ಅಮ್ಮ ತಾತ ಒಗ್ದ್ ಇಸ್ತ್ರಿ ಹಾಕಿದ ಬಟ್ಟೆನ ತಂದ್ ಕೊಟ್ಟೊ.

ನಾನ್ ಕಿಸ್ತು ಕಟ್ಟಿಕೆ ಹೋಗುವ ನಮ್ಮ ತಾತನ ಕುಸಿನ ನೋಡ್ತಾ ಇದ್ದೆ, ಒಗ್ದ್ ಶುಚಿಯಾಗಿದ್ದ, ಮೊಣಕಾಲ್ ಮುಟ್ಟ ಬರುವ ಮುಂಡು ಉಟ್ಟು, ಅರೆ ಕೈ ತೋಳ್‌ನ ಅಂಗಿ ಹಾಕಂಡ್ ಮುಂಡಾಸ್ ಕಟ್ಟಿ ಠಾಕುಠೀಕಾಗಿ ತಾತ ಕಿಸ್ತು ಕಟ್ಟಿಕೆ ಹೊರ್‍ಟೊ.

ಇಂದಿಗೂ ಆ ದೃಶ್ಯ ನನ್ನ ಕಣ್ಣ ಮುಂದೆ ಬಂದದೆ. ಕಂದಾಯ (ತೆರಿಗೆ) ಕಟ್ಟುದು ನಮ್ಮ ಮುಖ್ಯ ಕರ್ತವ್ಯ ತ ಮುತುವರ್ಜಿ ಹಂಗೆನೆ ಆ ಸಂಭ್ರಮನ ನೆನ್ಸಿಕಣ್ಣನ ನಮ್ಮ ಹಿರಿಯರ ಬಗ್ಗೆ ಹೆಮ್ಮೆ ಎನ್ಸಿದೆ.

ಮನಪೂರ್ವಕವಾಗಿ ತೆರಿಗೆ ಕಟ್ಟುವ ಅಂದಿನವರ ಪ್ರಾಮಾಣಿಕ ಪ್ರಜ್ಞೆ ಇಂದಿನವ್ಕೆ ಅನುಕರಣೀಯ, ಮುಂದಿನವ್ಕೆ ದಾರಿ ದೀಪ.

(ಕಿಸ್ತು: ವರ್ಷ ವರ್ಷ ಕಟ್ಟುವ ಜಾಗೆನ ಕಂದಾಯದ ಒಂದು ಕಂತು)**ಹಳಬರ ಜೋಳಿಗೆ ಸಂಚಿಕೆ–9** ಕ್ಕೆ ಲೇಖನಗಳ್ನ ಆಹ್ವಾನಿಸಿಯೊಳೊ. ನಿಮ್ಮಲ್ಲಿ ಇಂತಹ ಕತೆಗ, ಇಲ್ಲರೆ ತಾತ ಅವ್ವ ಹೇಳ್ದ ಅವರ ನೆನ್ಪುನ ಕತೆಗ, ನಿಮ್ಮ ಅನುಭವ ಕತನಗ ಇದ್ದರೆ ಈ ವಿಳಾಸಕ್ಕೆ ಕಳ್ಸಿ ಕೊಡಿ

**ಜಯಮ್ಮ ಚೆಟ್ಟಿಮಾಡ, ಸಂಪಾದಕಿ ಮತ್ತು ಪ್ರಕಾಶಕಿ**
**ಕಾವ್ಯ ಕಾವೇರಿ, ಮೊಗರ್ಪಣೆ ಮನೆ, ಸುಳ್ಯ. ದ.ಕ**

# ಛೇ.. ಹಿಂಗೂ ಆದು ಉಟ್ಟ?

**ಡಾ. ಪುನೀತ್ ರಾಘವೇಂದ್ರ ಕುಂಟುಕಾಡು**

ಕುಂಟಡ್ಕ ದೊಡ್ಡಮನೆ ಪೊನ್ನಪ್ಪಂತೇಂಳ್ರೆ ಇಡೀ ಉಂಡೆಮಜಲ್ ಗ್ರಾಮಕ್ಕೇ ದೊಡ್ಡಜನ. ಸತ್ಯ, ಧರ್ಮಕ್ಕೆ ಹೆಸ್ರಾದ ಇವು ಭಾರೀ ಶ್ರಮಜೀವಿ, ನೋಡಿಕೂ ಹಾಂಗೆ.. ಆರೂವರೆ ಅಡಿ ಎತ್ತರದ ಅಜಾನುಬಾಹು..!! ಊರುನ ಯಾವುದೇ ಕಾರ್ಯಕ್ರಮಕ್ಕೆ ಹೋದರೂ ಜನ "ಏನ್ ಪೊನ್ನಣ್ಣಾ" ಹೇಳಿ ಕೈ ಎತ್ತಿ ನಮಸ್ಕಾರ ಮಾಡಿ ಮಾತಾಡ್ಸವು. ಇಂಥಾ ಪೊನ್ನಪ್ಪನವರ್ದ್ ಐದ್ ಗಂಡ್ ಎರಡ್ ಹೆಣ್ಣ್ ಮಕ್ಕಳ ತುಂಬು ಸಂಸಾರ. ಅದರ್ಲಿ ಹಿರಿಯವನೇ ನಮ್ಮ "ಸೋಮಪ್ಪ" . ಎಲ್ಲವ್ಕೂ ದೊಡ್ಡಂವ ಆದರ್ಂದ ಕರಿದು 'ಸೋಂಪಣ್ಣ'!! ಇವನೇ ನಮ್ಮ ಈ ಕಥೆನ ನಾಯಕ. ಒಳ್ಳೆ ವಿದ್ಯೆ, ಬುದ್ಧಿ ಒಟ್ಟಿಗೆ ಒಳ್ಳೆ ಉದ್ಯೋಗಲೂ ಇದ್ದ ನಮ್ಮ ಸೋಂಪಣ್ಣಂಗೆ ಪ್ರಾಯ ತುಂಬಿಕಂಡ್ ಬಂದಾಂಗೆ ಎಲ್ಲವ್ಕೂ ಬರುವ ಆಸೆನೂ ಹುಟ್ಟಿತ್. ಅದೇ 'ನಾನು ಒಂದು ಮೊದ್ವೆ ಆಕು ತಾ'. ಆದರೆ ಮನೆಲಿ ಅಪ್ಪನೊಟ್ಟಿಗೆ ಹೆಂಗೆ ಹೇಳ್ದು? ಮಕ್ಕ ಎಷ್ಟೇ ಬೆಳ್ದು ದೊಡ್ಡವರಾದರೂ ಅಯ್ಯೆ, ಅಪ್ಪಂಗೆ ಮಕ್ಕಳೇ ಅಲ!! ಅದರ್ಲೂ ನೇರ ಹೋಗಿ ಹೇಳ್ರೆ ತಮಾಷೆ ಮಾಡಿ ನೆಗಾಡ್ವೋತ ನಾಚಿಕೆ. ಆಗ ನೆನ್ಪಾದೇ ಸೋಂಪಣ್ಣಂಗೆ ಅವನ ಚಡ್ಡಿ ದೋಸ್ತಿ ಕಾಟಿಗುಂಡಿ ಮಿಲ್ರಿ ರಾಮಣ್ಣ!!

ಸೋಂಪಣ್ಣ ಅರ್ಕಿಲ್‌ಲಿ ಕಾಲಿ ಬಾಲೆ ಕುರ್ಲೆ ಅಡಿಲಿ ನುರ್ಕಿ ಇಸಿದ "ಗ್ಯಾರ್ದಣ್ಣ್" ದರ್ನೂ, ಒಂಚೂರು ಕಡ್ಡೆ ಉಪ್ಪಣನೂ ಹಿಡ್ಕಂಡ್ ದೋಸ್ತಿನಕ್ಕಲೆ ಹೊರ್ಟತ್. ದಾರಿಲಿ ಸಿಕ್ಕಿದ ಕಟ್ಟ, ಚೋಡಿಗಲ್ಲಿ ಕೈಕಾಲ್ ತೊಳ್ಕಂಡ್, ಯಾರೋ ಹಾಕಿದ ಅಡ್ಜಿಲ್‌ಗೆ ಬಿದ್ದ ಮೊಲನ ಕಾಡ್‌ಗೆ ಬುಟ್‌ಕಂಡ್, ಗುಡ್ಡೆಲಿ ಸೊಪ್ಪ್ ಹೆರ್ಕ್‌ಂಡಿದ್ದ–ಗದ್ದೆಲಿ ಹಳು ತೆಕ್ಕಂಡಿದ್ದ ಹೆಣ್ಮಕ್ಕಳೆಲ್ಲಾ ಮಾತಾಡ್ಸಿಕಂಡ್ ಕಾಟಿಗುಂಡಿ ಮನ್ಗೆ ಎತ್ತ್ ಕಾಕನ ಕೋಳಿಗಳೆಲ್ಲಾ ಮುಚ್ಚಿ ಹಾಕುವ ಹೊತ್ತ್. ಉದ್ಗಿಲ್ ತೆಗ್ಯಕಾಕನನೇ ಬೂದಿಗುಂಡಿಂದ ಎದ್ದ ನಾಯಿ ಕಚ್ಚಿಕೆ ಬಂದಾಂಗೆ ಓಡಿಬಂದರೂ, ನೆಂಟ್ರ್ ತ ಗೊತ್ತಾಗಿಯೋ ಏನೋ ಮೂಸಿಕೆ ಸುರುಮಾಡ್ತ್. ನೋಡ್ರೆ ರಾಮಣ್ಣ ಅಂಗಳಲೇ ಚುರ್ಕರ ಕುದ್ದ್ ಕಂಡ್ ಉರ್ಳ್‌ಗೆ ಬಿದ್ದ ಬರಿಂಕನ ಸಜ್ಜಿ ಮಾಡ್ತುಟ್ಟು!! ದೋಸ್ತಿ ಬಂದದರ ನೋಡಿ ಹೆರ್ಮಣೆನಾಂಗಿದ್ದ ಅಷ್ಟೂ ಹಲ್ಲ್ ಬುಟ್ಟ್ "ಕೋಲ್ಗೇಟ್ ಸ್ಮೈಲ್" ಕೊಟ್ಟರೆ, ರಾಮಣ್ಣನ ಹೆಣ್ಣ್ ಅಮ್ಮಣಿ ಅಂಗಳಲಿ ಉರ್ಬುಳಿ ಹೊಣ್ಕ್ಯಾಡಿಕಂಡಿದ್ದ ಮಕ್ಕಳ ನೀರ್ ಚೊಂಬ್ ತಾಕೆ ಬೆರ್ಸಿ ತಾನೂ ಅಣ್ಣನ ಮಾತಾಡ್ಸಿಕೆ ಬಾತ್.. ಕತ್ತಲೆಗೆ ಸೋಂಪಣ್ಣಂಗೆ ಭಾರೀ ಗಮ್ಮತ್. ಸ್ಪೆಷಲ್ ಮಿಲ್ರಿ ರಮ್ ಬೇರೆ!! ಊಟ ಎಲ್ಲ ಆದ ಮೇಲೆ ಸೋಂಪಣ್ಣ ದೋಸ್ತಿನೊಟ್ಟಿಗೆ ಮೆಲ್ಲ ಬಂದ ವಿಷಯನ ಬಾಯ್ಬುಟ್ಟತ್. "ಯಾಗೋಳು ತಲೆದಿಂಬು ತೊಬ್ಬಿ ಹಿಡ್ದ್ ಮಲ್ಗಿ ಮಲ್ಗಿ ಸಾಕಾತ್ ಮಾರಾಯ. ಮೊದ್ವೆ ಆಕೂಂತ ಮನ್ಸಾದೆ. ಅಪ್ಪನೊಟ್ಟಿಗೆ ಹೆಂಗೆ ಹೇಳ್ದು.. ನಂಗೆ ಮೊದ್ವೆ ಮಾಡೀಂತ!!.. ನೀನೇ ಒಂದು ಉಪಾಯ ಹೇಳ್". ಮಿಲ್ರಿ ರಮ್ ಆಗಲೇ ತಲೆಗೆ ಹಿಡ್ದಿದ್ದ ರಾಮಣ್ಣಂಗೆ ದೋಸ್ತಿನ ಕಷ್ಟಕ್ಕೆ ಒಳ್ಳೆ ಉಪಾಯ ಕೊಟ್ಟತ್. "ಸೋಂಪ.. ನೀ ಹೋಗಿ ಪೊನ್ನ ಮಾವಂಗೆ ಹೇಳ್.. 'ಅಪ್ಪಾ.. ಅವ್ವ ಒಬ್ಬಂಗೆ ಮನೆ ಕೆಲ್ಸ ಎಲ್ಲಾ ಮಾಡಿಕೆ ಭಂಗ.. ತಮ್ಮಂದ್ರ್‌ಗೆ ಮೊದ್ವೆ ಮಾಡಿ.. ಮನೆಗೆ ಎರ್ಡ್ ಹೆಣ್ಣ್ ಮಕ್ಕ ಬಂದವೆ'.. ಆಗ ಮಾವ ಹೇಳುವೊ 'ದೊಡ್ಡಂವ ನಿನ್ನ ಬುಟ್ಟ್ ಉಳ್ದವ್ಕೆ ಮೊದ್ವೆ ಮಾಡ್ರೆ ನೋಡ್ದವ್ ಏನ್ ಹೇಳುವೊ. ದುರೂಗೆ ನೀ ಮೊದ್ವೆ ಆಗ್.. ಮತ್ತೆ ಒಳ್ದವ್ಕೆ'.. ಆಗ ನಿನ್ನ ಮೊದ್ವೆ ಗ್ಯಾರಂಟಿ ಆದೆ" ಅಷ್ಟೆ!!

ಮಾರ್ನೆ ದಿನ ಬೊಳ್ಪುಗೆ ಕೋಳಿಕೂಂಗಿಕೇ ಒದ್ಲು ಎದ್ದ ಸೋಂಪಣ್ಣ ಅಮ್ಮಣಿ ಮಾಡ್ದ ಬೊಡ್ರೊಟ್ಟಿ, ಕತ್ತಲೆನ ಗಸಿ ತಿಂದ್ ಓಡಿಕಂಡ್ ತೇಳುವಾಂಗೆ ಬಂದ್ ಮನೆಗೆ ಎತ್ತಿತ್. ಬಂದದೇ ಸೀದ ಅಪ್ಪನ ಮುಂದೆ ಹಾಜರ್. ಪೊನ್ನಣ್ಣ ಆಗಷ್ಟೆ ಜಾಲ್ ಕರೆಲಿ ಮಾಡ್ದ ನೆಟ್ಟಿಗೆ ನೀರ್ ಹೊಯ್ದ್ ಬಂದ್ ದೊಡ್ಡಮನೆ ಕೈಮರಲಿ ಕುದ್ದ್ ಸುಧಾರ್ಸಿಕಣ್ತೊಳೊ. ದೋಸ್ತಿ ಹೇಳಿಕೊಟ್ಟಾಂಗೆ ಸೋಂಪಣ್ಣ ಉರ್ಗಿತ್.. "ಅಪ್ಪಾ ಮನೆಲಿ ಜನ ಜಾಸ್ತಿ ಆಗಿ ಅವ್ವ ಒಬ್ಬಂಗೆ ಎಲ್ಲಾ ಕೆಲ್ಸ ಭಂಗ. ಹಂಗೇ ತಮ್ಮಂದ್ರ್‌ಗೆ ಮೊದ್ವೆ ಮಾಡ್ರೆ ಆಕಿಲೆನಾ?" ಆ ಮಾತ್‌ನ ಕೇಳಿ ಪೊನ್ನಣ್ಣಂಗೆ ಕಣ್ಣ್‌ಲಿ ನೀರ್ ತುಂಬಿ, ಮಂಜನ ಕೈ ಹಿಡ್ಕಂಡ್ "ನೀ ನನ್ನ ಮಂಜ ಅಲ್ಲ ಬಲ.. ನೀನೇ ನಂಗೆ ಅಪ್ಪ. ಮನೆ ಜವಬ್ದಾರಿ ಎಲ್ಲಾ ನಾ ಹೇಳದೆ ನೀನೇ ತಕಂಡಳ. ನಿನ್ನಂಥ ಮಂಜ ಹುಟ್ಟಿಕೆ ನಾ ಎಷ್ಟ್ ಪುಣ್ಯ ಮಾಡಿರೊಕೊ!! ಆಗಲಿ.. ನೀ ಹೇಳ್ದಾಂಗೆ ತಮ್ಮಂದ್ರ್‌ಗೆ ಮಾತ್ರ ಅಲ್ಲ.. ಒಳ್ಳ ನೆಂಟ್ರ್ ಸಿಕ್ಕಿರೆ ನಿನ್ನ ತಂಗೆಕಳಿಗೂ ಒಟ್ಟಿಗೇ ಮೊದ್ವೆ ಮಾಡೊನೊ!!" ತಿರ್ಗಿ ಎಂಥಾಂತ ಹೇಳ್ದು ಸೋಂಪಣ್ಣ.. ನನ್ನ ಹಣೆಲಿ ಇಷ್ಟೇ ಬರ್ದುಟ್ಟೂಂತ ನೆನ್ಸಿಕಂಡ್, ಉಪಾಯ ಹೇಳಿಕೊಟ್ಟ ದೋಸ್ತಿಗೆ "ಹುಲಿ ಹಿಡಿಯಕೆ" ತ ಬೊಯ್ಕಂಡ್ "ಕುರೆ ಸತ್ತ ಕೊರುಂಬು" ನಾಂಗೆ ತೋಟ ಕಡೆ ಹೊರ್ಟತ್. ಆರ್ತಿಂಗಳೊಳಗೆ ಸೋಂಪಣ್ಣನ ಎರ್ಡ್ ತಮ್ಮಂದರಿಗೂ, ತಂಗೆಕಳಿಗೂ ಒಂದೇ ಚಪ್ಪರಲಿ ಮೊದ್ವೆನೂ ಕಳ್ತ್!! ಆದ್ದರ್ರಂದ ನಮ್ಮ ಹೈದ, ಗೂಡೆಗಳೇ.. ಮೊದ್ವೆ ಆಕುಂತಿದ್ದರೆ ನೇರವಾಗಿ ಅವ್ವ, ಅಪ್ಪಂಗೆ ಹೇಳಿ. ಇಲ್ಲರೆ ಕಡೆಗೆ ನೀವೂ ಹೇಳಕಾದು.. "ಛೇ.. ಹಿಂಗೂ ಆದು ಉಟ್ಟಾ?"

## ಕಾಲ ಬದಲಾವ್ನು ಮಗಾ
–ಕುಡೆಕಲ್ಲು ಸವಿತ

ನಮ್ಮ ಕುಟುಂಬಲಿ ಅತೀ
ಹಿರಿಯವು ನಮ್ಮ ಉಗ್ಗಪ್ಪಾ..
ಅವರೊಟ್ಟಿಗೆ ಮಾತಾಡಿ ಗೆಲ್ಲಿಕೆ
ಯಾರಿಗೂ ಬೊತ್ತಪ್ಪಾ..

ಅವರ ನೋಡಿರೆ ಮಕ್ಕಳಿಗೆಲ್ಲಾ ಭಾರಿ ಹೆದ್ರಿಕೆ
ಅವು ಬುಡಿಕಿಲೆ ಮಕ್ಕಳೆಲ್ಲಾ ಸುಮ್ಮನೆ ಕುದ್ರಿಕೆ
ಮಕ್ಕಳ ಹೊಟ್ಟೆಗಡ ಗಂಜಿ ಇಳಿಯಕರೆ
ಅಮ್ಮಂದರೆಲ್ಲಾ ಉಗ್ಗಪ್ಪನ ಹೆಸರ್ ಹೇಳುವ

ಎಂತದೇ ಜಂಬರಕ್ಕೂ
ನಮ್ಮ ಉಗ್ಗಪ್ಪ ಮುಂದೆನೇ ಬರುವಾ..
ನಾಯಿ, ಕೊತ್ತಿಗ ಒಟ್ಟಿಗೆ ಬಂದವೇಂತ
ಕೈಲಿ ದೊಣ್ಣೆ ತರುವಾ,..

ಜಂಬರಕ್ಕೆ ಬಂದ ಹೆಮ್ಮಕ್ಕ
ಉಗ್ಗಪ್ಪನಾ ಕಾಲೆ ಹಿಡಿವಾ
ಒಳ್ಳೆದೇ ಆಗಲಿಯಪ್ಪಾತ ಹೇಳಿ
ಭಾರೀ, ಖುಸಿಲಿ ಹರ್ಸುವಾ.

ಸಣ್ಣ ಸಣ್ಣ ಮಕ್ಕಳೆಲ್ಲಾ ಕರ್ದ್
ತೊಡೇಲೆ ಕುದ್ರುಸುವಾ
ಬೇಟೆಗೆ ಹೋದ ಕಥೆಗಳ ಎಲ್ಲಾ
ಭಾರೀ ಗತ್ತ್‌ಲಿ ಹೇಳುವಾ

ಹಿರಿಯರ ಮೇಲೆ ಗೌರವ ಇಲ್ಲೆ
ಕೇಳಿಕೆ ಅವ್ಕೆ ಪುರುಸೋತು ಇಲ್ಲೆ
ಹೇಳಿಕೆ ಹೋದರೆ ಪ್ರಯೋಜನ
ಇಲ್ಲೆ ಈಗನ ಮಕ್ಕಳಿಗೆ

ಕಾಲ ಬದವಾವುಟು ಮಗ ಉಗ್ಗಪ್ಪ
ಹೇಳ್ದು ಕಾಲ ಬದವಾವುಟು ಗಡ
ಕಾಲ ಬದಲಾತ್ಲೆ ಉಗ್ಗಪ್ಪ, ನಾ
ಹೇಳ್ದ ಮೊನುಷ್ಯ ಬದಲಾವುಟುತ

## ಹೆತ್ತವ್ವನ ಮಾತ್
–ಕಡ್ಲೇರ ಜಯಲಕ್ಷ್ಮಿ ಮೋಹನ್

ಕೇಳವ್ವಾ ಕೂಸ್ ಒಂದ್ ಘಳ್ಗೆ
ನೀ ಕೇಳ್।
ನಂಗೆ ತೇಳ್ಯೆ ಹಂಞ
ಸಮೆ ಮಾಡ್ಕಂಡ್ ಕೇಳ್।

ನೀ ಗೀರ್ದ ಒಂದ್ ಕಡ್ಡಿಂದ
ಹತ್ತಾರ್ ದೀಪಗ ಹೊತ್ತೋಕು।
ನೀ ಮಾಡ್ದ ಒಂದ್ ಕೆಲ್ಸಂದ
ಆ ಮನೆದ್ ಘನತೆ ಹೆಚ್ಚಾಕು।

ಕೇಡ್ ಮಾತ್‌ಗಳ ಕರೆಲಿ ಮಡ್ಗಿ
ಒಳ್ಳೆದರ ಮಾತ್ರ ನೀ ಕೇಳ್।
ನಾಲ್ಗೆದ್ ಹಿಡ್ತ ತಪ್ಪಿ ಬುಟ್ರೆ
ಸಂಸಾರ ಆದು ನಾಲ್ಕ್ ಹೋಳು।

ಬುಟ್ಟ್ ಕೊಡಿಕೆ ಬೊತ್ತು
ಸಂಸಾರದ ಗುಟ್ಟ್।
ಹಂಞ ಸೆಡ್ಲ ಆದರೂ
ಹೋಬುಡ್ದು ನಿನ್ನ ಕೈಬುಟ್ಟ್।

ಕುತ್ತಿಗೆಲಿರ್‌ಲಿ ಯಾಗೋಳು
ಕರಿಮಣಿ ತಾಳಿನ ಚೆಯಿನ್।
ನೋಡ್ದವ್ಕೆ ಅದ್ ಸಾರಿ ಹೇಳ್ದೆ
ದೀರ್ಘ ಸುಮಂಗಲಿ ನೀನ್।

ಮಕ್ಕಳಾಟ ಅಲ್ಲ ಕೂಸಿದ್
ನಾ ಓಡಿ ನೀ ಗೆದ್ದಂಗೆ।
ಬಾಳ ತಕ್ಕಡಿ ಸಮ ತೂಗೋಕು
ಒಬ್ಬಂದೊಬ್ಬ ಅಡಿಮ್ಯಾಲೆ ಆಗದಂಗೆ।

ನಾ ಹೇಳ್ದ ಈ ಮಾತ್‌ಗ
ನಿಂಗೆ ಈಗ ಅರ್ಥಾಕಿಲೆ।
ಬ್ಯಾಸ್ರ ಕೊಡ್ವ ಈ ಮಾತ್‌ಗ
ನಾಡ್ದಾರ್ ನಿಂಗರ್ಥ ಆಗದಿರ್ಕಿಲೆ।

# ನಮ್ಮೊಳಗಿನ ಸಾಧಕರು

**– ಕೋಡಿ ನೀತು ಶಂಭು**



**ಗುಡ್ಡಗಾಡು ಓಟಗಾರ ಪುಣ್ಯಕ್ಷೇತ್ರ ತಲಕಾವೇರಿನ ತಕ್ಕ ಕುಟುಂಬದ ಹೈದ ಕೋಡಿ ಜಿತಾನ್:**

ಕೋಡಿ ಜಿತಾನ್ (ಜಿತ್ತು), ಇಂವ ಭಾಗಮಂಡಲ, ಚೇರಂಗಾಲ ಗ್ರಾಮದ ಕೋಡಿ ಜನಾರ್ಧನ (ಜಪ್ಪು) ಮತ್ತೆ ಸಾವಿತ್ರಿ ಇವರ ಮಂಜ. ಇವ ಒಬ್ಬ ಗುಡ್ಡಗಾಡು ಓಟಗಾರ. ಇಂವ 5.ಕಿ.ಮೀ ಇಂದ ಹಿಡ್ದ್ 25 ಕಿಲೋಮೀಟರ್ ವರೆಗೆ ಓಡ್ದೆ. ಇವಂಗೆ ಓಡಿಕೆ ಸ್ಪೂರ್ತಿ ಕೊಡ್ಡವು ಇವನ ಚಿಕ್ಕಪ್ಪ, ಮಾಜಿ ಯೋಧ ಕೋಡಿ ಈಶ್ವರ (ಮಿಟ್ಟು) ತೇಳವ್. ಜಿತ್ತು ಸುರುನ ಸಲದ ಓಟಲೇ ಮೊದಲ ಇನಾಮ್ ತಕಂಡದ್ ಚೇರಂಗಾಲ ಗ್ರಾಮದ ಕೈಲು ಮುಹೂರ್ತಲಿ, ಇಲ್ಲಿಂದ ಇಂವ ಓಡಿಕೆ ಸುರು ಮಾಡ್ದ್. ಇವಂಗೆ ಕಾಲಿಗೆ ಬೂಟು ಹಾಕಂಡ್ ಓಡುವ ಅಭ್ಯಾಸ ಇಲ್ಲೆ, ಇಂವ ಓಡ್ದು ಬೆರಿ ಕಾಲ್‌ಲಿ. ಇಂವ ತುಂಬಾ ಕಡೆ ಓಡಿ ಎಲ್ಲಲ್ಲೂ ಬಹುಮಾನಗಳ್ನ ಪಡ್ಕಂಡುಟು.



**ಇಂವನ ಇಲ್ಲಿವರೆಗಿನ ಸಾಧೆನೆಗ:**

1. ನಮ್ಮ ಗ್ರಾಮಲೇ ನಡ್ದ ಕಾವೇರಿ ಜನ್ಮಭೂಮಿ ಟ್ರಸ್ಟ್ ಇವರ ವತಿಂದ ನಡ್ದ ತವರೂರ ಕೂಟ ಜಂಭರಲಿ ತೃತೀಯ ಇನಾಮ್.
2. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ, ಗೌಡ ಸಮಾಜ ಚೇರಂಬಾಣೆ, ಇಲ್ಲಿ ಎರಡನೇ ಇನಾಮ್.
3. ನೇತಾಜಿ ಯುವಕ ಮಂಡಳಿ ತಾಳತ್‌ಮನೆ, ಇಲ್ಲಿ ಪ್ರಥಮ
4. ನೇತಾಜಿ ಹೈಸ್ಕೂಲ್ ಬಲ್ಲಮಾವಟಿ, ಇಲ್ಲಿನ ಶತಮಾನೋತ್ಸವ ಜಂಭರಲಿ ಪ್ರಥಮ.
5. ಗಾಳಿಬೀಡು ಯುವಕ ಸಂಘ(ರಿ), ಇಲ್ಲಿ ಪ್ರಥಮ
6. ನವರತ್ನ ಯುವಕ ಸಂಘ (ರಿ), ತಲ್ತಾರೆ ಚೆಟ್ಟಳ್ಳಿ, ಇಲ್ಲಿ ಪ್ರಥಮ
7. ನೇತಾಜಿ ಯುವಕ ಮಂಡಳಿ ತಾಳತ್‌ಮನೆ, ಇಲ್ಲಿ ಪ್ರಥಮ
8. ಲಯನ್ಸ್ ಕ್ಲಬ್ ಆಫ್ ಗೋಣಿಕೊಪ್ಪಲು (ಫ್ರೀಡಂ ರನ್) ಪ್ರಥಮ
9. ಕಾವೇರಿ ಜನ್ಮಭೂಮಿ ಟ್ರಸ್ಟ್, ಚೇರಂಗಾಲ (2016) ಪ್ರಥಮ
10. ಗೌರಿ ಗಣೇಶೋತ್ಸವ ಸಮಿತಿ, ಪಟ್ಟಣ ಪಂಚಾಯ್ತಿ, ವಿರಾಜಪೇಟೆ, ಇಲ್ಲಿ ಪ್ರಥಮ
11. ಕನ್ನಡ ರಾಜ್ಯೋತ್ಸವದ ಅಂಗವಾಗಿ ಕೊಡಗು ಜಿಲ್ಲಾ ಮಟ್ಟದ ರಸ್ತೆ ಓಟಲಿ ಪ್ರಥಮ
12. ರೋಟರಿ ಕ್ಲಬ್ ವಿರಾಜಪೇಟೆ ಇಲ್ಲಿ ಪ್ರಥಮ
13. ಮಡಿಕೇರಿ ನಗರದ ದಸರ ಕ್ರೀಡಾಕೂಟಲಿ ಪ್ರಥಮ
14. ಆಯುಧ ಪೂಜೆ ಉತ್ಸವ ಸಮಿತಿ ಸಿದ್ದಾಪುರ, ದ್ವಿತೀಯ
15. ನೇತಾಜಿ ಯುವಕ ಮಂಡಳಿ ತಾಳತ್‌ಮನೆ (2016) ದ್ವಿತೀಯ
16. ಟ್ರಾಫಿಕಲ್ ರೇಸ್ ಮ್ಯಾರಥಾನ್ (21 ಕಿ.ಮೀ) ದ್ವಿತೀಯ
17. ಕೈಲು ಮುಹೂರ್ತ ಕ್ರೀಡಾಕೂಟ, ಚೇರಂಬಾಣೆ, ದ್ವಿತೀಯ
18. ಕಾವೇರಿ ಜನ್ಮಭೂಮಿ ಟ್ರಸ್ಟ್ ಚೇರಂಗಾಲ (2017) ಪ್ರಥಮ




ಇಂವ ಇನ್ನು ಮುಂದಕ್ಕೆ ಕೂಡ ಒಳ್ಳೆ ಓಟಗಾರ ಆಗಲಿ, ಗೌಡ ಜನಾಂಗಕ್ಕೆ, ಗೌಡ ಸಂಸ್ಕೃತಿಗೆ ಒಳ್ಳೆ ಹೆಸ್ರ್ ತರ್ಲಿ. ಆ ಕಾವೇರಿ ಮಾತೆನ ಆರ್ಶಿವಾದ ಮತ್ತೆ ಕುಲ ಗುರು ವೆಂಕಟರಮಣನ ಆಶೀರ್ವಾದ ಸದಾ ಇಂವನ ಮೇಲೆ ಇರ್ಲಿತ ಬೇಡಿಕಂಬೊನೊ. ಇವಂಗೆ ದೇವ್ರು ಒಳ್ಳೆ ಆಯುಷ್ಯ

# ಭರವಸೆಯ ಬಾಲ ಕಲಾವಿದ ಬಿ.ವಿ. ತುಷಾರ್ ಗೌಡ

**ಹೊಸೊಳಿಕೆ ಯೋಗೀಶ್**

ಜೀ ಕನ್ನಡದ ಡ್ರಾಮಾ ಜೂನಿಯರ್ಸ್ ಕಾರ್ಯಕ್ರಮಲಿ ಭಾಗವಹಿಸಿ ಮನೋಜ್ಞವಾಗಿ ಅಭಿನಯಿಸಿ ರಾಜ್ಯ, ರಾಷ್ಟ್ರಾದ್ಯಂತ ಜನರ ಮನ್ಸ್‌ಗೆದ್ದ ಕರಾವಳಿಯ ಭರವಸೆಯ ಬಾಲ ಕಲಾವಿದ ಬಿ.ವಿ ತುಷಾರ್ ಗೌಡ.

ವಿಜಯಕುಮಾರ ಮತ್ತೆ ರೂಪಾ ಇವರ ಮಂಞ. ಬೆಳ್ತಂಗಡಿ ತಾಲೂಕಿನ ದಿಡುಪೆ ಗ್ರಾಮದ ಪಯ್ಯೆ ಮನೆಲಿ ಹುಟ್ಟಿ, ಸುಳ್ಯದ ಅಮ್ಮ ಚೆಣ್ಣರ ಮನೆಲಿ ಅಕ್ಷರ ಕಲಿಕೆ. ಸುರುಮಾಡಿ, ನಾಲ್ಕನೇ ತರಗತಿ ವರೆಗೆ ರೋಟರಿ ಶಾಲೆಲಿ ಕಲ್ತವೆ. ಈಗ ಏಳನೇ ತರಗತಿನ ಸೈಂಟ್ ಜೋಸೆಫ್ ಶಾಲೆಲಿ ಓದ್ತಾ ಒಳೊ.



ಸಣ್ಣ ವಯಸ್‌ಲೇ ಚುರುಕಾಗಿದ್ದ ತುಷಾರ್ ಯಕ್ಷಗಾನ, ಭರತನಾಟ್ಯ, ಫಿಲ್ಮ್ ಡ್ಯಾನ್ಸ್‌ನ ಕಲ್ತವೆ. ಭರತನಾಟ್ಯ ಜೂನಿಯರ್ ಪರೀಕ್ಷೆನ ಪ್ರಥಮ ಶ್ರೇಣಿಲಿ ತೇರ್ಗಡೆ ಆಗೊಳೊ. ವಿದುಷಿ ವಿದ್ಯಾಶ್ರೀ ರಾಧಾಕೃಷ್ಣ, ಕೊಡ್ಲ ಗಣಪತಿ ಭಟ್ ವಾಸುದೇವ ರೈ ಬೆಳ್ಳಾರೆ, ಜೀವನ್ ರಾಂ ಸುಳ್ಯ ಇವರ ಶಿಷ್ಯನಾಗಿ ತನ್ನೊಳೆಗೆನ ಕಲಾವಿದನ ಬೆಳ್ಸಿಕೊಂಡೊಳೊ.

"ಓಂ ಶರಣಂ ಅಯ್ಯಪ್ಪ" ಚಲನಚಿತ್ರ ಚಿತ್ರರಂಗದ ಇವರ ಸುರುನ ಮೆಟ್ಟು. "ಪ್ಲೇ", "ಶ್ರೀ ರಾಘವೇಂದ್ರ ವೈಭವ", "ಎಳೆಯರು ನಾವು ಗೆಳೆಯರು" ಈ ವರೆಗೆ ಇವು ನಟಿಸಿದ ಚಿತ್ರಗ. ಕನ್ನಡ ಮಾತ್ರ ಅಲ್ಲದೆ ಬೇರೆ ಬೇರೆ ಭಾಷೆಗಳಿಂದಲೂ ಇವ್ಕೆ ಬೇಡಿಕೆ ಬರ್‍ತಾ ಉಟ್ಟು. ಹೆಚ್ಚಾಗಿ ಭಕ್ತಿ ಪ್ರಧಾನ ಚಿತ್ರಗಳೇ ಹೆಚ್ಚಾಗಿ ಬಂದದೆ ಗಡ. ಈ ಒಂದೇ ತರದ ಪಾತ್ರಂದ ವಿಭಿನ್ನ ಪಾತ್ರಗಳಲಗಲಿ ಕಾಣಿಸಿಕಂಬ ಆಸೆ ತುಷಾರ್‌ಗೆ.

ಬಣ್ಣದ ಬದುಕೇ ಹಾಂಗೆ ಎಲ್ಲಾ ತಿಳ್‌ದವರಾಗಿರೊಕು. ತುಷಾರ್ ಅಭಿನಯ, ವಾಚಿಕಾಭಿನಯ, ನೃತ್ಯ ಮಾತ್ರ ಅಲ್ಲದೆ ಜನರ ತನ್ನತ್ತ ಸೆಳೆವ ಮುಗ್ದತೆ ಅವನಲ್ಲಿಟ್ಟು. ಈ ಎಲ್ಲಾ ಕಾರಣಗಳ್‌ಮದ ಬೇಡಿಕೆ ನಟ ಆವ್ವು ತುಷಾರ್.

ಈಗಾಗಲೇ ಅಮ್ಮ ಚೆಣ್ಣರ ಮನೆ ಪುಸ್ಕಾರ, ಬೆಸ್ಟ್ ಚೈಲ್ಡ್ ಅವಾರ್ಡ್, ಪ್ರತಿಭಾರತ್ನ ಪ್ರಶಸ್ತಿ, ಕಲಾ ರತ್ನ ಪ್ರಶಸ್ತಿ, ಕಲಾ ಪ್ರತಿಭೆ ಪ್ರಶಸ್ತಿ, ಗುತ್ತಿಗಾರ್‌ನ ಕಿರಣ ರಂಗ ಅಧ್ಯಯನ ಸಂಸ್ಥೆನ ರಾಜ್ಯ ಮಟ್ಟದ "ಕಿರಣ ರಂಗ ಪ್ರಶಸ್ತಿ" ಮತ್ತೆ ನೂರಾರ್ ಸಮ್ಮಾನಗ, ಅಭಿನಂದನೆಗ ಇವ್ಕೆ ಸಿಕ್ಕುಟು.

ಯಾವುದನ್ನು ಕಷ್ಟ ಪಡದೆ ಇಷ್ಟ ಪಟ್ಟ್ ಮಾಡುವ ತುಷಾರ್‌ಗೆ ಸಿ.ಎ ಓದುವ ಬಯಕೆ. ದೊಡ್ಡ ಗುರಿ, ಸಾಧಿಸುವ ಛಲ, ಕಠಿಣ ಪರಿಶ್ರಮ ಮತ್ತೆ ನಂಬಿಕೆ ಇರ್ಕನ ಏನು ಬೇಕಾರ್ ಸಾಧಿಸಕ್ ತೇಳ್ದಕ್ಕೆ ತುಷಾರ್ ಸಾಕ್ಷಿ. ಇಂವ ಗ್ರಾಮೀಣ ಪ್ರದೇಶದ ಹೈದ ಒಳ್ಳೊಳ್ಳೊಯ ಅವಕಾಶನ ಒದಗಿ ಬರ್‌ಲಿ ಕಲಾ ಸೇವೆ ನಿತ್ಯ ನಿರಂತರ ಆಗಿರಲಿ ತಾ ಹಾರೈಸುವೆ.

---

**ನಗೆಹನಿ**

**–ಪೇರಿಯನ ಹರ್ಷಿತ ಕೇಶವ**

ಎಲ್ಲವು ಕುಡ್ದವೆ ಕಾಫಿ, ಟೀ
ಮೋದಿ ಕುಡ್ಸಿವೆ ಜಿಎಸ್‌ಟಿ

## ಕಿರಣ ಸಂಸ್ಥೆ ವತಿಂದ ಮಕ್ಕಳ ಹಬ್ಬ–2017

ಗುತ್ತಿಗಾರು ಕಿರಣ ರಂಗ ಅಧ್ಯಯನ ಸಂಸ್ಥೆ ವತಿಂದ ವಳಲಂಬೆ ಶ್ರೀ ಶಂಖಪಾಲ ಸುಬ್ರಹ್ಮಣ್ಯ ದೇವಸ್ಥಾನಲಿ ಇತ್ತೀಚೆಗೆ ರಾಜ್ಯ ಮಟ್ಟದ "ಮಕ್ಕಳ ಹಬ್ಬ–2017" ನಡ್ತ್.



ಕಿರಣರಂಗ ಅಧ್ಯಯನ ಸಂಸ್ಥೆ ಅಧ್ಯಕ್ಷ ಯೋಗೀಶ ಹೊಸೊಳಿಕೆ ಯವರ ನಿರ್ದೇಶನಲಿ ನಡ್ದ ಕಾರ್ಯಕ್ರಮಲಿ ರಾಜ್ಯ ಮಟ್ಟದ ನುರಿತ ಸಂಪನ್ಮೂಲ ವ್ಯಕ್ತಿಗ ಭಾಗವಹಿಸಿದ್ದೊ. 100 ಕ್ಕೂ ಹೆಚ್ಚಿನ ಮಕ್ಕಳ್ಗೆ ಕಲೆ, ಸಾಹಿತ್ಯ, ಸಂಸ್ಕೃತಿನ ಪರಿಚಯಿಸಿಕೊಟ್ಟೊ. ಕಾರ್ಯಕ್ರಮ ಗೌಜಿಲಿ ನಡ್ತ್.

---

## ಹೊಸ ರುಚಿ

### ಕರುಂ ಕರುಂ ಚಕ್ಕುಲಿ

**–ಮೂಲೆಮಜಲು ಯಶೋದಮ್ಮ ಚಿನ್ನಪ್ಪ**

**ಬೇಕಾಗುವ ಸಾಮಗ್ರಿಗ:**



ಬೆಳ್ತಗೆ ಅಕ್ಕಿ – 1 ಕೆ.ಜಿ

ಉದ್ದಿನ ಬೇಳೆ – 1 ಕೆ.ಜಿ

1 ಸಣ್ಣ ಲೋಟಲಿ ಹುರಿಗಡಲೆ

1 ಟೀ ಚಮ್ಚ ಎಳ್ಳು

ಹಂಞ ಜೀರಿಗೆ

3 ಚಮ್ಚ ಮೆಣ್ಸ್‌ನ ಹೊಡಿ

ರುಚಿಗೆ ತಕ್ಕ ಉಪ್ಪು ಮತ್ತೆ ಹಂಞ ತುಪ್ಪ ಇಲ್ಲರೆ

ಎಣ್ಣೆ ಹೊರ್‍ಯಕೆ ಒಂದು ಲೀ ಎಣ್ಣೆ

**ಮಾಡುವ ಕ್ರಮ:**

ಬೆಳ್ತಗಿ ಅಕ್ಕಿನ ತೊಳ್ದ್ ಲಾಯ್ಕ ಒಣ್ಗ್ಸಿ ಇಸೊಕು, ಒಣಗಿದ ಅಕ್ಕಿನ ದಪ್ಪ ತಳ ಬಾಣಲೆಲಿ ಗಮಗಮ ಬಾಕೆ ಮುಟ್ಟ ಹೊರೆಯಕು. ಉದ್ದಿನ ಬೇಳೆನ ಸ ಕೈ ಬೆಚ್ಚ ಆಗುವವರೆಗೆ ಹೊರ್ದರೆ ಸಾಕ್. ಹುರಿಗಡಲೆನ ಹೊರೆಯಕೆ ಬೊತ್ತ್. ಇವು ಮೂರರ್‍ನ ಹೊಡಿ ಮಾಡಿ ಇಸಿಕಣೊಕು. ಕಡೆಗೆ ಒಂದು ಪಾತ್ರೆಲಿ 1 ಕೆ.ಜಿ ಹೊಡಿಗೆ ಎರಡರಷ್ಟ್ ನೀರ್ ಹಾಕಿ ಒಲೆ ಮೇಲೆ ಇಟ್ಟ್ ಬಿಸಿ ಆಕನ ಉಪ್ಪು, ಜೀರಿಗೆ, ಎಳ್ಳ್, ಮೆಣ್ಸ್‌ನ ಹೊಡಿ ಹಾಕಿ ನೀರು ಕೊದಿಯಕಾಕನ ಇಳ್ಸಿಕಣಕು. ಹಿಟ್ಟ್‌ನ ಜಾಸ್ತಿ ಬೇಯ್ಸಿಕಣಕಾದ್. ಕಡೆಗೆ ರೊಟ್ಟಿ ತಟ್ಟೆಗೆ ಹಾಕಂಡ್ ತುಪ್ಪ ಇಲ್ಲರೆ ಎಣ್ಣೆನ ಹಾಕಿ ಲಾಯ್ಕ ಕಲ್ಸಕು. ಕಲ್ಸಿ ಆದ ಮೇಲೆ ಚಕ್ಕುಲಿ ಒಲರೆಲಿ ಹಾಕಿ ಒತ್ತೊಕು.

ಒಲೆ ಮೇಲೆ ಒಂದ್ ಬಾಣಲೆಲಿ ಎಣ್ಣೆ ಹಾಕಿ ಅದ್ ಕಾದಂಗೆ ಒತ್ತಿ ಇಸಿದ ಚಕ್ಕುಲಿನ ಮೆಲ್ಲೆ ಹಾಕಕು (ಎಣ್ಣೆ ಲಾಯ್ಕ ಕಾಯದೆ ಇದ್ದರೆ ಚಕ್ಕುಲಿ ಹೊಡಿ ಹೊಡಿ ಆದೆ). ಹೊರ್ದ ಮೇಲೆ ಚಿಬ್ಬುಲುಲಿ ಇಲ್ಲರೆ ಕಣ್ಣ್ ಇರ್‍ವ ಪಾತ್ರೆಗೆ ಹಾಕೊಕು. ಹೆಚ್ಚಿಗೆ ಇದ್ದ ಎಣ್ಣೆ ಎಲ್ಲ ಇಳ್ದ ಮೇಲೆ ಚಕ್ಕುಲಿನ ರುಚಿ ನೋಡಕ್. ಎಲ್ಲವೂ ಮಾಡಿ ತಿಂದ್ ನಿಮ್ಮ ಅಭಿಪ್ರಾಯ ತಿಳ್ಸಿ.

# ಇನ್‌ಸಿಲ್ ಮೊದ್ವೆ

**–ಕಡ್ಲೇರ ಜಯಲಕ್ಷ್ಮಿ ಮೋಹನ್**

(ಸಣ್ಣ ಮಕ್ಕಳ್ಗೆ ಎಂತಸ ಗೊತ್ತಿಲದೇ ಇದ್ದರೂ ನೂರಾರ್ ತಲೆಹರ್ಪೆ ಪ್ರಶ್ನೆಗಳ್ನ ಕೇಳುವೆ. ಅಂದರೂ ಅದ್ ಒಂಥರಾ ತಮಾಷೆಯಾಗಿನೇ ಇದ್ದದೆ. ಒಂದನೇ ತರಗತಿನ ಕೂಸ್ ಅಮ್ಮನೊಟ್ಟಿಗೆ ಹಿಂಗೆ ಪ್ರಶ್ನೆಗಳ್ನ ಕೇಳ್ದೆ)

ಕೂಸು: ಅಮ್ಮಾ ನಿನ್ನ ಇನ್‌ಸಿಲ್ ಹೆಂಗಮ್ಮಾ?

ಅಮ್ಮ: ನನ್ನ ಇನ್‌ಸಿಲ್ **ಕೆ.ಎಂ** ತ

ಕೂಸು: ಆಗ ಅದ್ ಮುಂಚೆ ಹೆಂಗೆ ಇತ್ತ್?

ಅಮ್ಮ: ಓ ಅದಾ...? **ವೈ.ಜಿ** ತ ಇದ್ದದ್ ಈಗ ಕೆ.ಎಂ ತ ಆವ್ರು

ಕೂಸು: ಅದ್ಯಾಕಮ್ಮ ಹಂಗೆ ಆದ್?

ಅಮ್ಮ: ನಾನ್ ಮೊದ್ವೆ ಆಕೆ ಮುಂದೆ ವೈ.ಜಿ ತ ಇತ್ತ್. ಈಗ ಅಪ್ಪನ ಹೆಸ್ರ್ ಬಾಕನ ಕೆ.ಎಂ ತ ಆತ್.

ಕೂಸು: ಆಗ ನನ್ನದ್‌ಸ ಹಂಗೆ ಆದೆ ಅಲಮ್ಮ?

ಅಮ್ಮ: ಹೆಂಗೆ ಆದು ಕೂಸು?

ಕೂಸು: ನಾನ್ ದೊಡ್ಡವುಳಾಗಿ ಮೊದ್ವೆ ಆಕನ ನನ್ನ ಇನ್‌ಸಿಲ್‌ಸ ನಿನ್ನಂಗೆ ಬ್ಯಾರೆ ಆದೆ ಅಲ್ಲಮ್ಮಾ.

ಅಮ್ಮ: ನಿಂಗಿನ್ನೂ 6 ವರ್ಷ. ಈಗನೇ ಮೊದ್ವೆ ಗಿದ್ವೆ ಅಲ್ಲ ನಿಂಗೆ. ನಿಂಗೆ ಮೊದ್ವೆ ಆಕುನಾ?

ಕೂಸು: ಮತ್ತೆ, ನಾನ್ ಮೊದ್ವೆ ಆಕು ಅಮ್ಮಾ. ಅಂದರೆ ಅಲ ನಂಗೆ ಹೊಸ ಇನ್‌ಸಿಲ್ ಸಿಕ್ಕುದು?

ಅಮ್ಮ: ಅಯ್ಯೋ ದೇವ್ರೆ. ಈ ಇನ್‌ಸಿಲ್‌ಗಾಗಿ ಈ ಮೊದ್ವೆ ಮಾತೆಲ್ಲನಾ?.. ಸದ್ಯಕೆ ಈಗ ಹೋಗಿ ಓದು.

---

## ಹನಿಗವನಗ

**–ಕೋಳುಮಾಡನ ದೇವಕ್ಕಿ ತಮ್ಮಯ್ಯ**

* ನನ್ನವುಳೇ ನೀ ಕೊಡುವ ಒಂದೊಂದ್ ಮುತ್ತ್
ಪ್ರೀತಿಯ ಹಸಿವುನ ಹೋಗಲಾಡ್ಸುವ ತುತ್ತು

* ಬಸ್‌ಗೆ ಲೇಟಾಗಿ ಹೊರ್‌ಟ್ರೆ ಬಸ್ ಮಿಸ್
ಹಂಗೆನೆ ಚಕ್ರದ ಗಾಳಿ ಹೋದ್ರೆ ಟುಸ್ಸ್

* ಇವುಳೊಬ್ಳು ಬಳುಕದೆ ಇರುವ ಬಳ್ಳಿ
ಏಕೆಂತೇಳ್ರೆ ಇವುಳ್ ಹಬಳ ಕುಳ್ಳಿ

* ಗೆಳತೀ ಖುಷೀಲಿ ನಿನ್ನ ಮುಖ ಸಿಹೀ ಗೆಣ್‌ಸ್
ಅದೇ ಸಿಟ್ಟ್‌ಲಿ ನಿನ್ನ ಮುಖ ಕಾಯಿಮೆಣ್ಸ್‌ಸ್

* ದೇವರೇ ನೀ ನೀಡ್ ನಾವ್ಗೆ ರಕ್ಷೆ
ಹಂಗೆನೇ ಕಾಪಾಡ್ ಹೊರಗೆ ಇಟ್ಟ ಆ
ನನ್ನ ಪಾದರಕ್ಷೆ

* ಬೆಳಿಗ್ಗೆ ಎದ್ದಂಗೆ ನಮ್ಮವ್ಕೆ ಕೊಡಕು ಬೆಡ್‌ಕಾಫಿ
ಇಲ್ಲೆ ತೇಳ್ರೆ ಅವ್ಕೆ ಏರ್ದೆ ಬಿ.ಪಿ

* ಮದುವೆ ಆಕೆ ಮುಂದೆ ಗೂಡೆಗ ಚಂದ್ರಮುಖಿ
ಮದುವೆ ಆದ ಮ್ಯಾಲೆ ಅವ್ಳು ಪ್ರಣಸಖಿ ಎರ್‌ಡ್
ಮಕ್ಕ ಆದ ಮ್ಯಾಲೆ ಅವ್ಳು ಸೂರ್ಪನಖಿ

## ನಗೆ ಹನಿಗ

**ಉಳುವಾರನ ದೇವಕ್ಕಿ**

* ಕಿಟ್ಟು: ನಾನ್ ಲಾಯ್ಕಲಿ ಚಿತ್ರ ಬರ್‍ದ್‌ರೆ ಏನ್ ಕೊಟ್ಟಿಯಾ?

ಪುಟ್ಟು: ಅದರ್‌ನ ಉಜ್ಜಿಕೆ ರಬ್ಬರ್ ಕೊಟ್ಟನೆ.

* ಅಣ್ಣ: ಕದ್ದ ವಸ್ತುನ ಇನ್‌ಮ್ಯಾಲೆ ಯಾರಿಗೂ ತೋರ್ಸ್‌ಬಡ ಆತ

ತಮ್ಮ: ಯಾಕಣ್ಣ?

ಅಣ್ಣ: ಇದರ್‌ನ ತೋರ್‍ಸಿರೆ ಕದ್ದೊದವು ಬಂದ್‌ಕೇಳ್ರೂ ನಿನ್ನ

ಅತ್ತಿಗೆ ಕೊಡ್ಡುದಲ್ಲೇಲ್ಲಾ!!

* ಮಗ: ಅಪ್ಪಂಗೆ ಕಣ್‌ಕಾಂಬಲೆಮ್ಮ

ಅಮ್ಮ: ಯಾಕೆ ಹಂಗೆ ಹೇಳಿಯಾ?

ಮಗ: ನಾನು ಅಪ್ಪನ ಹತ್ರ ಇದ್ರೂನು ನಿಂಗೆ ತಲೆ ಇಲ್ಲೆ ಅಂತ ಹೇಳ್ತೊಳೊ!!

# ಬೆಲೆ ಕಟ್ಟಕಾಗದಂತ ಪ್ರಶಸ್ತಿ ನನ್ನ ಪೊಪ್ಪಂಗೆ

**-ತರುಣ್ ಕೂಡಕಂಡಿ**

27 ವರ್ಷದ ಹಿಂದೆ.. ಅಂದ್ ಮಂಗಳವಾರ ಮೇ ತಿಂಗ 26ನೇ ತಾರೀಕ್ ಜೋರು ಮಳೆ, ಎಲ್ಲವೂ ಗದ್ದೆಗೆ ಹತ್ತಿರುವ ಮೀನುಗಳ್ನ ಹಿಡ್ಕಂಡ್ ಇರ್ಕನ, ಕೋಡಿ ಮತ್ತೆ ಮೂಲೆಮಜಿಲು ಗದ್ದೆ ಬೈಲ್‌ಲಿ ಒಬ್ಬ ಕೈಲಿ ಒಂದು ಚೀಲ ಹಿಡ್ಕಂಡ್ ಓಡಿ ಬರ್ತಾ ಒಳೊ.

ಓ ಕೂಡಕಂಡಿ ಲಕ್ಷ್ಮಣ ಭಾವ, ನಮಸ್ಕಾರ. ಏನ್ ಇಷ್ಟೊಂದ್ ಕುಸಿಲಿ ಓಡಿ ಬರ್ತಾ ಒಳರಿ

ಏನ್ ಕಥೆ? ಬಾವ ನಂಗೆ ಗಂಡು ಕೂಸು ಹುಟ್ಟಿತ್ ಮಿಠಾಯಿ ತಕಣಿ.

ಅದೇ ಕೂಸು ನಾನು. ಯಾರಿಗಾದ್ರು ಮೂರು ಹೆಣ್ಣು ಮಕ್ಕ ಹುಟ್ಟಿ ನಾಲ್ಕನೆದು ಗಂಡು ಕೂಸು ಹುಟ್ಟುಕನ ಹೇಳಲಾರದಷ್ಟ್ ಕುಸಿ ಆಗೇ ಆದೆ. ನನ್ನ ಪೊಪ್ಪಂಗೂ ಅದೇ ಆದ್.

ಅಂದ್‌ಂದ ಇಂದ್‌ವರೆಗೂ ನನ್ನ ಮೂರು ಜನ ಅಕ್ಕಂದಿರಿಗೂ, ನಂಗೂ ಒಳ್ಳೆ ವಿದ್ಯಾಭ್ಯಾಸ ಕೊಡ್ತುದ್ತೇಳ್ರೆ ಸಾಮಾನ್ಯ ಮಾತಲ್ಲ. ಯಾಕೆತ ಹೇಳ್ರೆ ನನ್ನ ಪೊಪ್ಪ ಯಾವ ಸರ್ಕಾರಿ ನೌಕರ ಅಲ್ಲ. ಒಬ್ಬ ಸಾಮಾನ್ಯ ರೈತ, ಅದರ್‌ಲ್ಲೊ ಭಾಗಮಂಡಲ ತ ಹೇಳ್ರೆ ಎಲ್ಲವ್ಕೂ ಗೊತ್ತು. ಚಳಿ, ಗಾಳಿ, ಮಳೆ ಸ್ವಲ್ಪ ಜಾಸ್ತಿನೇ. ಇಂತ ಊರುಲಿ ಮಕ್ಕಳ ಹೊಟ್ಟೆ, ಬಟ್ಟೆ ವಿದ್ಯಾಭ್ಯಾಸಕ್ಕೆ ಯಾವುದೇ ರೀತಿಲಿ ಕಮ್ಮಿ ಮಾಡ್‌ತ್ಲೆ ನನ್ನ ಪೊಪ್ಪ.

ಇಂದ್ ಮನೆಲಿ ನಾನ್, ಪೊಪ್ಪ, ಅಮ್ಮ ಮಾತ್ರ, ಮೂರು ಜನ ಅಕ್ಕಂದರ್‌ನ ಒಳ್ಳ ಗೌಡ ಮನೆತನಕ್ಕೆ ಮದ್ವೆ ಮಾಡಿ ಕೊಟ್ಟೊಳೊ.

ಒಂದು ಕಾಲಲಿ ಪೊಪ್ಪ ತಂದುಕೊಡುವ ಮಿಠಾಯಿಗಾಗಿ ಜಗಳ ಮಾಡಿಕಂಡ್ ಮರ್ಡ್‌ತಾ ಇದ್ದೆ, ಆದರೆ ಈಗ ಅಕ್ಕಂದರ್ ನೆಂಟ್ರಾಗಿ ಬಂದ್ 2-3 ದಿನ ಇದ್ದ್ ಹೋಕನ ಕಣ್ಣ್‌ಲಿ ನೀರ್ ಬಂದದೆ. ಅದ್ ನನ್ನ ಒಡ ಹುಟ್ಟಿದ ಅಕ್ಕಂದಿರ್ ಇನ್ನೊಂದು ಮನೆ ಸೊಸೆ ಆಗೊಳೊತ ಸಂತೋಷ ಗೊತ್ಲೆ... 25 ವರ್ಷ ಒಟ್ಟಿಗೆ ಬೆಳ್ದವು ಈಗ ನಮ್ಮ ಮನೆಲಿ ಇಲ್ಲೆತ ಗೊತ್ಲೆ.. ಒಂಥರ ಬೇಜಾರ್.. ಒಂಥರ ಖುಷಿ.. ಅಕ್ಕಂದಿರ್ ಬಂದ್ ಹೋಕನ ಅಂತು ನನ್ನ ಪೊಪ್ಪ ಅಪ್ಪನ ಮುಖ ನೋಡಿಕಾಲೆ.

ಒಬ್ಬ ಸಾಮಾನ್ಯ ರೈತ ಆಗಿ ಏನೇ ಕಷ್ಟ ಬಂದರೂ ನಾವ್ಗೆ ಮಾತ್ರ ಇರ್ಲಿ ನಮ್ಮ ಮಕ್ಕಳ್ಗೆ ಬಾಕೆ ಬೊತ್ತುತ ಇಷ್ಟ್ ಲಾಯ್ಕ ಸಾಕಿ ಬೆಳ್ಸೊಳ್‌ರಿ.

ಮೂರು ಜನ ಹೆಣ್ಣ್ ಮಕ್ಕ ಒಳ್ಳ ಮನೆತನಕೆ ಸೊಸೆಯಾಗಿ ಮಾಡಿಯೊಳ್ರಿ, ಹಂಗೆ ನಮ್ಮ ಮನೆಗೂ ಒಂದು ಸೊಸೆ ಬರ್ಲಿ, ಆ ಸೊಸೆ ನಾವ್ಗೆ ಮಗಳಾಗಿ ಇರ್ಲಿತ ಕಾಯ್ತಾಒಳ್ರಿ.

ಪೊಪ್ಪ ನಿಮ್ಮ ಈ 31ನೇ ವರ್ಷದ ವೈವಾಹಿಕ ಜೀವನಕ್ಕೆ ಶುಭ ಹಾರೈತಾ ಒಳೆ.

ಒಬ್ಬ ಗುರುವಾಗಿ, ಗೆಳೆಯನಾಗಿ, ಮನೆಯ ಯಜಮಾನನಾಗಿ ಎಲ್ಲವ್ಕೂ ಹೆಚ್ಚಾಗಿ ಒಬ್ಬ ಅಪ್ಪನಾಗಿ ಸಾಕಿ ಬೆಳ್ಸಿಯೊಳ್ರಿ. ಇದಕ್ಕಿಂತ ಸಂತೋಷ ಇನ್ನೊಂದ್ ಇಲ್ಲೆ ಅಂದ್‌ಕಣಿ, ನನ್ನ ಜೀವನಲಿ ಒಂದು ಬೆಲೆ ಕಟ್ಟಿಕಾಗದಂತಹ ಪ್ರಶಸ್ತಿ ಏನಾರ್ ಕೊಡೊಕುತ ಇದ್ದರೆ ಅದ್ ನಿಮಿಗೆ ಮಾತ್ರ ಪೊಪ್ಪ!!!

# ಅಪ್ಪ ಅವ್ವನ ಮರೆಬಡಿ

**ಸಂಗ್ರಹ: ಕುಯ್ಯಮುಡಿ ರಾಮಪ್ಪ**

ಎಂತಾದನ್ನಾದರೂ ಮರೆಯನಿ ಆದರೆ ಅಪ್ಪ ಅವ್ವನ ಮಾತ್ರ ಮರಿಬಡಿ. ಭೂಮಿಗಿಂತ ದೊಡ್ಡವು ಅವ್ವ, ಬಾನಿಗಿಂತ ದೊಡ್ಡವು ಅಪ್ಪ.

ಹೆತ್ತ್ ಹೊತ್ತು ಬೆಳ್ಸಿದ ಅವ್ವ ಅಪ್ಪನ ಮುಂದೆ ಬೇರೆ ಎಲ್ಲವೂ ಅಲ್ಪ. ಪುಣ್ಯ ಸಂಪಾದನೆಗೆ ಪೂಜೆ ಮಾಡುದು ಅಲ್ಲ, ಸಂಗಮಲಿ ಮೀಯದು ಅಲ್ಲ ಅವ್ವ ಅಪ್ಪನ ಕಣ್ಣ್‌ಲಿ ನೀರ್ ತರ್ಸದೆ ಇರ್ದೇ ಪುಣ್ಯ. ತಮ್ಮ ಪಾಲ್‌ನ ತುತ್ತುನ ನೀವ್ಗೆ ತಿನ್ಸಿ ನಿಮ್ಮನ್ನ ದೊಡ್ಡವರನ್ನಾಗಿ ಮಾಡಿಯೊಳೊ. ಇಂತಹ ಅಮೃತ ಕೊಟ್ಟವರ ಮುಂದೆ ವಿಷ ಕಕ್ಕ್‌ಬಡಿ. ನಿಮ್ಮ ಮೈ ಚಕ್ಕಳಂದ ಚಪ್ಪಲಿ ಮಾಡಿ ಕೊಟ್ಟರೂ ಅಪ್ಪ ಅವ್ವನ ಋಣ ತೀರ್ಸಿಕೆ ಆಲೆ. ನಿಮ್ಮ ತುಂಬಾ ಪ್ರೀತಿಸಿಯೊಳೊ. ನಿಮ್ಮ ಎಲ್ಲಾ ಅವಶ್ಯಕತೆಗಳ ಪೂರೈಸಿಯೊಳೊ. ಈ ತರ ಪ್ರೀತಿಸಿದವರ ಎಂದಿಗೂ ಮರಿಬಡಿ. ನೀವು ಲಕ್ಷ ಕೋಟಿ ಸಂಪಾದಿಸ್ತಾ ಇರ್ರ್ವರಿ ಆದರೆ ನಿಮ್ಮ ಅವ್ವ ಅಪ್ಪ ಸಂತೋಷಲಿ ಇಲ್ಲೆ ತೇಳ್ರೆ ನಿಮ್ಮ ಸಂಪತ್ತು ಕಾಲುಕಸಕ್ಕೆ ಸಮ. ಈ ಮಾತ್‌ನ ಒಪ್ಪಿಕೆ ಮರಿಬಡಿ. ಚೆಂಡಿ ಇದ್ದ ಜಾಗಲಿ ಅವು ಮಲ್ಗಿ ಲಾಯ್ಕದ ಜಾಗಲಿ ನಿಮ್ಮ ಮಲ್ಗಿಸಿಯೊಳೊ. ಇಂತ ಶ್ರೇಷ್ಠರಾದವರ ಕಣ್ಣುಗಳ್ಲಿ ಅಪ್ಪಿ ತಪ್ಪಿ ನೀರ್ ತರ್ಸ್‌ಬಡಿ. ನಿಮ್ಮ ಬದ್‌ಕನ ದಾರಿಲಿ ಅವು ಪ್ರೀತಿಂದ ಹೂ ಹಾಸಿಯೊಳೊ, ಹಂಗೆನೆ ಪ್ರೀತಿಸಿದವರ ದಾರಿಲಿ ನೀವು ಎಂದ್ ಮುಳ್ಳಾಗ್ಬಡಿ. ಹಣ ಇದ್ದರೆ ಪ್ರಪಂಚಲಿ ಎಲ್ಲನೂ ಸಿಕ್ಕಿದೆ. ಆದ್ರೆ ಅವ್ವ ಅಪ್ಪ ಸಿಕ್ಕುಲೆ. ಇಂತಹವರ ಪವಿತ್ರ ಪಾದಗಳ್ಗೆ ಬಗ್ಗಿ ನಮಸ್ಕಾರ ಮಾಡಿಕೆ ಎಂದೂ ಮರಿಬಡಿ. ನೀವು ಮಕ್ಕಳ್‌ಂದ ಸೇವೆ ಪಡ್ಕಣಕುತ ಆದ್ರೆ ಸುರುಗೆ ನೀವು ಮಕ್ಕಳಾಗಿ ನಿಮ್ಮ ಅವ್ವ ಅಪ್ಪನ ಸೇವೆ ಮಾಡಿ. ಮಾಡಿದುಣ್ಣೋ ಮಹಾರಾಯ ತೇಳ್ದಂಗೆ ನೀವು ಮಾಡ್ದದ್ರ ಫಲನೇ ನೀವ್ಗೆ ಸಿಕ್ಕುದು.ಈ ಲೋಕದ ಗಾದೆನ ಎಂದಿಗೂ ಮರಿಬಡಿ. ಇಷ್ಟರ ಮುಟ್ಟ ಸಾಧಿಸಿದ್ ಸಾಸಿವೆ ಕಾಳ್‌ನಷ್ಟ್, ಇನ್ನ್ ಸಾಧಿಸಿಕೆ ಇರ್ದು ಕುಂಬಳಕಾಯಿಯಷ್ಟ್ ಉಟ್ಟು, ಕಳ್ದ ಸಮಯನ ಗ್ಯಾನ ಮಾಡ್ದರ ಬುಟ್ಟು ಸಾಧಿಸೋ ಗುರಿ ಕಡೆ ಗಮನ ಕೊಡ್ನೋ.

---

## ಕಾತರ

–ಸತ್ಯ ಎಂ.ಬಿ

ನಿನ್ನ ನೋಟದಲ್ಲೆನೋ ಸೆಳೆತ
ಮನದಾಸೆ ಹೇಳಕು ತೇಲೋ ತುಡಿತ
ಕಣ್ಣ್‌ಲಿ ಕಣ್ಣಿಟ್ಟು ನೋಡ್ದ ಕ್ಷಣಗ
ಸಾಗಿ ಮುಂದಕೆ ಬೆಸದುಟ್ಟು ಮನಗ
ವರುಷಗ ಸಾಗ್ತಾ ಉಟ್ಟು ಹೇಳದೆ ಕೇಳದೆ
ಗಿಡವೂ ಮರ ಆತ್ ನಿನ್ನ ಕಾಯದೆ
ಕುಂಟುತ್ತಾ ಸಾಗ್ತಾ ಉಟ್ಟು ಬಾವನೆ ನೋವ್‌ಲಿ
ಸೇರಿ ಬಿಡುವಾಸೆ ಮತ್ತೆ ನಿನ್ನಲಿ

## ಪೊಗ್ಗು ಮತ್ತೆ ಬೇಸಗೆ ತಿಂಗಳ್ಲಿ ಹತ್ತು ಕುಟುಂಬ ಹದಿನೆಂಟು ಗೋತ್ರದ ದೈವಾಧೀನರಾದವರ ವಿವರ

| ಹೆಸ್ರ್ | ವಯಸ್ | ತೀರ್ದ ತಾರೀಖ್ |
|---|---|---|
| ಬಿಟ್ಟೀರ ಪದ್ಮಾವತಿ | 74 | 17–5–2017 |
| ಕಾಂಗೀರ ನಂಜುಂಡ | 84 | 18–5–2017 |
| ಪೊನ್ನೆಟ್ಟಿ ಪಾರ್ವತಿ | 72 | 18–5–2017 |
| ಚಿಲ್ಲನ ಕಾರ್ಯಪ್ಪ | 70 | 18–5–2017 |
| ಕರ್ಲಾಡಿ ಚಂದ್ರಶೇಖರ್ | 42 | 19–5–2017 |
| ತಳೂರು ಬೊಳ್ಳಮ್ಮ | 82 | 21–5–2017 |
| ಮಲ್ಲಿಗೆ ಮನೆ ಪೂವಮ್ಮ | 92 | 23–5–2017 |
| ಬಾರಿಕೆ ವಾಸುದೇವ | 73 | 23–5–2017 |
| ಕುರುಂಜಿ ಸೋಮಣ್ಣ | 95 | 24–5–2017 |
| ಹುದೇರಿ ಮಾಚಯ್ಯ | 59 | 26–5–2017 |
| ಮುಕ್ಕಾಟಿ ಶೀಲಾವತಿ | 69 | 26–5–2017 |
| ಸೋಮೆಟ್ಟಿ ದೇವಯ್ಯ | 75 | 29–5–2017 |
| ಹೊಸೊಕ್ಲು ಚಿನ್ನಮ್ಮ | 81 | 30–5–2017 |
| ಸಿರಕಜೆ ಮೀನಾಕ್ಷಿ | 60 | 2–6–2017 |
| ಮುಕ್ಕಾಟಿ ಬಿದ್ದಪ್ಪ | 70 | 3–6–2017 |
| ಕುಂಜಿಲನ ಕಾಮವ್ವ | 85 | 7–6–2017 |
| ಬಾರಿಕೆ ಪೊನ್ನಪ್ಪ | 83 | 8–6–2017 |
| ಪರಿವಾರ ರಾಜಪ್ಪ | 40 | 10–6–2017 |
| ಪೊನ್ನಚ್ಚನ ತೇಜ | 33 | 13–6–2017 |
| ಗುಬ್ಬಮ್ಮನ ಮನೆ ಪಟೇಲ್ ಕುಟ್ಟಪ್ಪ | 69 | 14–6–2017 |
| ಪಾಕ ಮುಕ್ಕಾಟಿ ರಾಜು | 75 | 15–6–2017 |
| ತೋಟಂಬೈಲು ವಾಣಿ | 55 | 17–6–2017 |
| ಪೋರೆರ ವಿಠ್ಠಲ | 64 | 18–6–2017 |
| ಪಾರೆಮಜಲು ಶಾರದ | 88 | 18–6–2017 |
| ನಿಡ್ಯಮಲೆ ಪುಷ್ಪಾವತಿ | 55 | 19–6–2017 |
| ಕೆಂಜನ ಧನಂಝಯ | 65 | 19–6–2017 |
| ಬೊಮ್ಮುಡಿ ಅಯ್ಯಣ್ಣ | 67 | 20–6–2017 |

*ನಾವ್ಗೆ ಸಿಕ್ಕ ಮಾಹಿತಿ ಪ್ರಕಾರ ಇಲ್ಲಿ ಪ್ರಕಟಿಸಿಯೊಳೊ.

ಇನ್ನ್ ಮುಂದೆ ಯಾವುದಾದರ್ ಮಾಹಿತಿಗ ಇದ್ದರೆ ನಮ್ಮೊಂದಿಗೆ ಹಂಚಿಕಣಿ.

## ಚಂದಾದಾರಲ್ಲಿ ಒಂದು ಮನವಿ:

ನಮ್ಮ ಈ ಅರೆಬಾಸೆ ಮುಡ್ಪು ಪತ್ರಿಕೆ ಅರ್ಧ ವಾರ್ಷಿಕನ ಪೂರೈಸುಟು. ಹವಲಾರ್ ಜನ ಚಂದ ಹಣದೊಟ್ಟಿಗೆ ದೇಣಿಗೆನ ಸ ನೀಡಿ ಸಹಕರಿಸಿಯೊಳೊ. ಇನ್ನು ಸಾಕಷ್ಟ್ ಜನ ಚಂದಾರರ್ ಚಂದಾ ಹಣ ಕೊಡಿಕೆ ಒಳೊ. ಕೆಲವ್ ಫೋನಾಯಿಸಿ ಎಲ್ಲಿ ಹೆಂಗೆ ಕೊಡಕು ತ ಸ ವಿಚಾರಿಸಿಯೊಳೊ. ಈ ಕೆಳಗೆ ನಮ್ಮೊಟ್ಟಿಗೆ ಈ ಪತ್ರಿಕೆನ ಏಳಿಗೆಗೆ ಸಹಕರಿಸಿದ.. ಸಹಕರಿಸ್ತಾ ಇರ್ವ ಕೆಲವ್ ಜನರ ಹೆಸರ್ ಹಂಗೆ ದೂರವಾಣಿ ಸಂಖ್ಯೆಗ ಉಟ್ಟು. ನಿಮ್ಮ ಹಣನ ಅವರತ್ರ ತಲ್ಪಿಸಿರೂ ಆದೆ. ನಿಮ್ಮೆಲ್ಲರ ಪ್ರೋತ್ಸಾಹ ಸದಾ ಹಿಂಗೇ ಇರ್‌ಲಿ.

| | | |
|---|---|---|
| ಕೊಂಪುಳಿ ಇಂದಿರ | ಮರಗೋಡು | 9448300755 |
| ಚೀಯಪ್ಪನ ಜಲಜಾಕ್ಷಿ | ಮೂರ್ನಾಡು | |
| ಮೇರ್‌ಕಜೆ ಲೋಹಿತ್ | ಮೂರ್ನಾಡು | 9980777704 |
| ಚೀಯಪ್ಪನ ನವೀನ್ | ಬೆಂಗಳೂರು | 8884571075 |
| ಕೊಂಬಂಡ ಭೀಮಯ್ಯ | ಮೈಸೂರು | 9741533567 |
| ಅಮೆಮನೆ ಪಾಲಾಕ್ಷ | ಮಡಿಕೇರಿ | 9449767424 |

ಇಲ್ಲೆ ತೇಳ್ರೆ ನೇರ ಬ್ಯಾಂಕ್ ಖಾತೆಗೆ ಸ ಜಮಾ ಮಾಡಕ್

ಹೆಸರ್: Vinodh M.N
ಖಾತೆ ಸಂಖ್ಯೆ: 036001532462
ಬ್ಯಾಂಕ್: ICICI Bank
ಶಾಖೆ: Electronic City
ಐ.ಎಫ್.ಸಿ ಕೋಡ್ : ICIC0000360

## ಹಾಸ್ಯ

**–ಪೇರಿಯನ ಹರ್ಷಿತ ಕೇಶವ**

ಾ : ನನ ಮುಖ ಾಯೆe ಾಣುವ ಒಂದು ಕನ U ತಕ ಾ ಿೂೀಗು.....

ಗುಂಡ: ಎಲ ಅಂ 2ಹು hಿ ಾ ...

* ಮುಖ ಾಣುವ ಕನ U >....ಿ

ಎಲ ದಲು ನನ ಮುಖhಿ ಾಣeಉಟುL...

*******************************

ಿಯ: ಾನು ಅ4ೀ3ಕsಿ8 ಿೂೀಕು ಅಂತ ಒ?ಿ....

ಗುಂಡ: ೌದ ! ತುಂಬ ದುಡು ಿೀlಾsಿ ಅಲ?....

ಿಯ: ಇ6ಿ¬,ಸು h ಾ ನ ಾ eಿ ಾ ಿ ದುಡು..?

ಗುಂಡ: ಾಂ .......!

# ಮಳೆಗಾಲದ ಅಥಿತಿಗ

ಮಳೆಗಾಲ ಶುರು ಆತ್ ತೇಳ್ರೆ ಮಲೆನಾಡ್ ಜನಕ್ಕೆ ಎಲ್ಲಿಲ್ಲದ ಕುಸಿ. ಗದ್ದೆ ಕೆಲ್ಸ ತೋಟ ಕೆಲ್ಸ ಹಿಂಗೆ ಕೃಷಿ ಕಡೆ ತಮ್ಮನ್ನ ತೊಡಗಿಸಿಕಂಡವೆ. ಹಂಗೆನೆ ಮೊದ್ಲೆಲ್ಲ ಮಳೆ ಹೆಚ್ಚಾಗಿ ಇರ್ತಾ ಇದ್ದದ್ರಂದ, ಆ ಸಮಯಲಿ ಹೊರಗೆ ಹೋಕೆ ಆಗದ್ರಂದ ಮನೆಗೆ ಬೇಕಾದ ಅಕ್ಕಿ, ಬೇಳೆನೆಲ್ಲ ಸುರುಗೇ ತಂದ್ ಲಾಟ್ ಹಾಕ್ತಾ ಇದ್ದೊ.

ಇನ್ನು ದಿನ ಗೈಪು ಮಾಡಿಕೆ ತರಕಾರಿ ಬೇಕಲ್ಲ..? ಅದ್ಕೆ ನಮ್ಮವ್ ತಲೆನೆ ಕೆಡ್ಸಿ ಕಣ್ತಾ ಇಲ್ಲೆ. ಸುತ್ತಮುತ್ತಲ್‌ನ ಪ್ರಕೃತಿನೇ ಅವ್ಕೆ ತರಕಾರಿ ತೋಟ ಆಗಿತ್, ಆಗುಟ್ಟು.....

ಹಿಂಗೆ ಮಳೆಗಾಲಲಿ ನಮ್ಮ ಸುತ್ತಮುತ್ತ ಸಿಕ್ಕೋ ಎಷ್ಟೋ ನೈಸರ್ಗಿಕ ಹಣ್ಣು, ಕಾಯಿ, ಗಡ್ಡೆ, ಗೆಣ್ಸ್‌ನ ತಮ್ಮ ಆಹಾರ ಪದ್ಧತಿಲಿ ಬಳ್ಸಿಕಣ್ತಾ ಇದ್ದೊ. ಅಂತಹ ಕೆಲವ್ ವಸ್ತುಗಳ ಪರಿಚಯನೇ ಈ ಲೇಖನ.



**ಅಳ್‌ಂಬು:** ಅಳ್‌ಂಬು ತೇಳ್ಕನನೇ ಬಾಯಿಲಿ ನೀರ್ ಬಾಕೆ ಸುರು ಆದೆ. ಮಳೆಗಾಲದ ಸುರುಂದ ಹಿಡ್ದ್ ಮಳೆಗಾಲ ಮುಗೆಕೆ ಮುಟ್ಟ ತರಾವರಿ ಅಳ್‌ಂಬುಗ ನಮ್ಮ ನಾಲೆಗೆಗೆ ರುಚಿ ಕೊಟ್ಟೆದೆ. ಹೆಚ್ಚ್ ಗುಡ್ಗಿ ಮಳೆ ಬಾತ್ ತೇಳ್ರೆ 'ನಾಳೆ ಅಳ್‌ಂಬು ಏಳ್ದು, ಬೊಳ್ಪುಗೆ ಒಮ್ಮೆ ತೋಟ ಗದ್ದೆ ಸುತ್ತಿ ಬಾಕು' ತ ಜನ ಗ್ಯಾನ ಮಾಡುವೆ. ಹೆಚ್ಚ್ ಹುತ್ತ ಇರ್ವ ಜಾಗೆಲಿ ಈ ಅಳ್‌ಂಬುಗಳ ದರ್ಶನ ಆದೆ. ವೈಜ್ಞಾನಿಕವಾಗಿ 'ಬೂಸು' (ಫಂಗೈ) ಜಾತಿಗೆ ಸೇರ್ದ ಇದ್ ಮಲೆನಾಡ್ ಜನಗಳ ಆಹಾರ ಪದ್ದತಿಲಿ ಒಂದಾಗಿ ಸೇರುಟು.

ಮಳೆಗಾಲದ ಸುರು ಆಗ್ತಾ ಇದ್ದಂಗೆ ಗದ್ದೆ ಪುಣಿಲಿ, ತೋಟಗಳ್ಲಿ ಒಂಟಿಯಾಗಿ ಏಳುವ ನಾಯಿಮರಿ ಅಳ್‌ಂಬು ಸಿಕ್ಕಿದೆ. ಇದ್ ಒಂದು ರುಪಾಯಿ ನಾಣ್ಯದ ಗಾತ್ರಂದ ಹಿಡ್ದ್ ಸಣ್ಣ ಮಕ್ಕಳ ಕೊಡೆ ಗಾತ್ರದ ಮುಟ್ಟ ಸಿಕ್ಕಿದ ಉದಾಹರಣೆ ಉಟ್ಟು. ಅಂತ ದೊಡ್ಡ ಅಳ್‌ಂಬು ಸಿಕ್ಕಿರೆ ಒಂದು ಗೈಪಿಗೆ ಸಾಕ್. ಇದೇ ನಾಯಿಮರಿ ಅಳ್‌ಂಬುಲಿ ದಂಟ್ ಉದ್ದ ಇದ್ದರೆ ಸುಳೀರ್ ಅಳ್‌ಂಬು ತ ಹೇಳುವೆ.



ಹಂಗೆ ಕಾಫಿ ತೋಟ ಇಲ್ಲೆ ಬಾಣೆಗಳ್ಲಿ ಹತ್ತಿ ನ ಹರ್ಡಿದಾಂಗೆ ಜೊಂಪೆ ಜೊಂಪೆ ಆಗಿ ಸಿಗುವ ಅಳ್‌ಂಬು ಬೆಳ್ಚರಿ ಅಳ್‌ಂಬು. ಇದು ಬೆಳ್ಳಂಗೆ ಆಗಿ ಇದ್ದದೆ. ಇದರ ಗೈಪು ಮಾಡಿ ರೊಟ್ಟಿಗೆ ಒಟ್ಟಿಗೆ ತಿಂಬಕೆ ಲಾಯ್ಕ. ಹೆಚ್ಚು ಕಮ್ಮಿ ನಮ್ಮ ಮ್ಯಾಗಿ ನೂಡಲ್ಸ್‌ನ ಹಂಗೆ ಇದ್ದದೆ. ಇದೇ ತರಲಿ.. ಆದ್ರೆ ಇದರಷ್ಟ ಪ್ರಮಾಣಲಿ ಸಿಕ್ಕದೇ ಇದ್ದರೂ ಹಂಞ ಕಪ್ಪು ಬಣ್ಣಲಿ ಇರ್ದು ಹುಲ್ಲು ಅಳ್‌ಂಬು. ಇದ್ ಸ ತಿಂಬಕೆ ರುಚಿ.

ಮಳೆಗಾಲದ ನಡುಲಿ ಮಣ್ಣ್ ಹಂಞ ಮೆತ್ತಂಗೆ ಆದಂಗೆ ಹೆಗಲ್ ಅಳ್‌ಂಬು ಎದ್ದದೆ. ಇದ್ ಗಾತ್ರಲಿ ನಾಯಿಮರಿ ಅಳ್‌ಂಬುನಾಂಗೆ ಇದ್ದರೂ ಬಣ್ಣಲಿ ಹಂಞ ಬಿಳಿ. ಇದು ಎದ್ದರೆ ಎರ್ಡು ಮೂರು ಕುಕ್ಕೆ ಅಷ್ಟ್ ಏಳ್ದು ಸ ಉಟ್ಟು.



ಇವಿಷ್ಟ್ ಮಳೆಗಾಲಲಿ ಹೆಚ್ಚಾಗಿ ಸಿಗುವ ಅಳ್ಂಬುಗ ಇದೂ ಅಲ್ಲದೆ ಮರ ಅಳ್ಂಬು ಮತ್ತೆ ಕಲ್ಲಳ್ಂಬು (ಮೊಟ್ಟೆ ಅಳ್ಂಬು) ಸ ಉಟ್ಟ್. ಮರ ಅಳ್ಂಬು ಮರದ ಕೊಂಬೆಗಲ್ಲಿ ಅಂಟಿಕಂಡ್ ಬೆಳ್ದದೆ. ನೋಡಿಕೆ ಎರಡೂ ಕಡೆ ಬೆಳ್ಳಂಗೆ ಇದ್ದದೆ. ಇನ್ನ್ ಕಲ್ಲಳ್ಂಬು ಇಲ್ಲೆ ಮೊಟ್ಟೆ ಅಳ್ಂಬು ಇದು ಬಾಣೆಲಿ ಇಲ್ಲರೆ ಮರದ ಬುಡಲಿ ಎದ್ದದೆ ಉರ್ಟಾಗಿ ಹಕ್ಕಿ ಮೊಟ್ಟೆನಂಗೆ ಇದ್ದದೆ. ಇದ್ ಸ ತಿಂಬಕೆ ರುಚಿ. ಇವೆರಡರ ಬಳಕೆ ಬಾಳ ಕಮ್ಮಿ. ಇದರಾಂಗೆ ಹುಚ್ಚು ಅಳ್ಂಬೆಗ ಇದ್ದವೆ ಹಂಗಾಗಿ ಆರ್ಸಿ ತಾಕೆ ಯಾರೂ ಹೆಚ್ಚು ಪ್ರಯಾಸ ಪಡ್ಲೆ.

ಅಳ್ಂಬು ತಿಂಬಕೆ ಎಷ್ಟು ರುಚಿನೊ ಕೆಲವೊಮ್ಮೆ ಅಷ್ಟೇ ಅಪಾಯಕಾರಿ. ಅಳ್ಂಬು ತಾಕನ ಹುಷಾರ್‌ಲಿ ನೋಡಿ ತಾಕು. ಹುಚ್ಚಳ್ಂಬು ಇಲ್ಲರೆ ಬೇರೆ ಜಾತಿನ ಅಳ್ಂಬು ತಿಂದರೆ ಆರೋಗ್ಯಕೆ ಹಾನಿಕರ. ಹಳ್ಳಿಕಡೆ ಈಗಲೂ ಅಳ್ಂಬು ಗೈಪು ಮಾಡ್ಕನ ಕಬ್ಬಿಣನ ಕಾಸಿ ಇಸುವೆ. ಏನಾದರ್ ನಂಜಿ ಇದ್ದರೆ ಕಬ್ಬಿಣ ಎಳ್ಕಂಡದೆ ತಾ.

ಇಷ್ಟ್ ತರಾವರಿ ಅಳ್ಂಬುಗ ನಮ್ಮ ಮಳೆಗಾಲದ ತರಕಾರಿ ಕೊರತೆಗಳ್ನ ನೀಗಿಸಿದೆ ಹಂಗೆನೆ ವಿಶೇಷ ಅಡುವೆ ಆಗಿ ನಮ್ಮ ಜಿಹ್ವಾ ಚಾಪಲ್ಯನ ತೀರ್ಸಿದೆ.

**ಕಣಿಲೆ:** ಕಣಿಲೆ ಇನ್ನೊಂದು ರುಚಿಕರ ಪದಾರ್ಥ. ಎಳೆ ಬಿದಿರ್‌ನ ಕಣಿಲೆ ತ ಹೇಳುವೆ. ಆಗ ತಾನೆ ಮಣ್ಣ್‌ಂದ ಸಣ್ಣ ಗೋಪುರ ತರ ಹೊರಗೆ ಬರ್ತಾ ಇರ್ವ ಕಣಿಲೆನ ಕುಯ್ಕಂಡ್ ಬಂದ್.. ಅದನ್ನ ಸಣ್ಣ ಕುಯ್ದ್. ಮೂರು ದಿನ ನೀರ್‌ಲಿ ನೆನ್ಸಿ ಇಸಕು..ತಂದಂಗೆ ಬೇಸಿರೆ ಅದ್ ವಿಷ.. ಮೂರು ದಿನ ನೀರ್‌ಲಿ ಇಸಿರೆ.. ಹುಳಿ ಬಂದ್ ವಿಷದ ಅಂಸ ಎಲ್ಲ ಬುಟ್ಟದೆ. ಮತ್ತೆ ಒಗ್ಗರಣೆ ಹಾಕಿ ಗೈಪು ಇಲ್ಲೆ ಪಲ್ಯ ಮಾಡ್ರೆ ತಿಂಬಕೆ ಬಾರೀ ರುಚಿ. ಕಡ್ಲೆ ಹಾಕಿ ಗೈಪು ಮಾಡ್ರಂತೂ...!!! ಮ್.



ನೈಸರ್ಗಿಕವಾಗಿ ಬೆಳೆವ ಈ ಬಿದಿರು, ಹುಲ್ಲು ಜಾತಿಗೆ ಸೇರ್ದ ಸಸ್ಯ ಪ್ರಬೇಧ. ಕೊಡಗ್‌ನ ಮಳೆಕಾಡ್‌ಗಳ್ಲಿ ಗುಂಪು ಕಟ್ಟಿ ಬೆಳ್ಕಂಡ್ ಉಟ್ಟ್.. ಮೇ ತಿಂಗ ಸುರು ಆಗ್ತಾ ಇದ್ದಂಗೆ ಇದರ ಸಣ್ಣ ಸುರುಳಿಗ ಮಣ್ಣ್ ಅಡಿಂದ ಎದ್ದ್ ಹೊರಗೆ ಬಾಕೆ ಸುರು ಆದೆ. ಸುಮಾರ್ 6–7 ಅಡಿ ಮುಟ್ಟ ಬೆಳ್ದ ಕಣಿಲೆ ತಿಂಬಕೆ ಲಾಯ್ಕ.. ಇನ್ನ್ ಬೆಳ್ದರೆ ಪ್ರಯೋಜನಕೆ ಬಾಲೆ. ಮಳೆಗಾಳ ಸುರು ಆಕನ ಎಲ್ಲವೂ ಹೊಳೆಕರೆ, ಕಾಡ್‌ಲಿ ಕಣಿಲೆ ಹುಡ್ಕಿಕೆ ಸುರು ಮಾಡುವೆ. ಮುಳ್ಳ್‌ನ ನಡುಲಿ ಬುಡ್ಸಿ ಹೊರಗೆ ತಾಕು ತ ಆದರೆ ಒಂದೆರಡ್ ಕಡೆ ಮೈ, ಕೈಗೆ ಬಿದಿರು ಮುಳ್ಳ್ ತಾಂಗದೆ ಇರ್ದುಲೆ. ಆದರೂ ಕಣಿಲೆ ಬೇಟೆ ಬುಡ್ದುಲೆ. ಕಣಿಲೆನ ಉಪ್ಪಿನಕಾಯಿ ಸ ಮಾಡಿ ಇಸುವ

......ಮುಂದುವರ್ದದೆ.

## ನೆಲಮಾಳಿಗೆಯೊಳಗೊಂದು ದಿನ

**–ಸುಮಂಗಲ ಕಿಣಿ ಮೂಡುಬಿದಿರೆ**

ಅಂದಾಗಿತ್ತು ನನ್ನ ಪಾಲಿನ ಕರಾಳದಿನ, ಎರಡ್ ಸಾವಿರದ ಎರಡ್!
ಬಲವಾದ ಬಿರುಗಾಳಿ ಬೀಸಿ, ಬದ್ಕಾತ್ ಬರಡ್!
ಸುರುಗೆಲ್ಲ ಹಗಲಿರುಳ್ ದುಡಿಮೆ, ಅರಿಯಕೆ ಸೇವೆಯ ಮಹಿಮೆ
ಹರಿದಾಗೆಲ್ಲ ಸುರ್ದ ಬೆವರ್! ಗ್ಯಾನ ಆಗ್ತಾ ಇತ್ತ್ ಮನೆ ತವರ್!
ಬಾಳಸಂಗಾಥಿಯಾಗಿ ಸಾಗಿದಷ್ಟ್ ದೂರ,, ಮೈಮನಸ್ಸೆಲ್ಲ ಭಾರ!
ಸೇವಾರೂಪದಿ ಮುನ್ನಡೆಯಲು, ಸಿಕ್ಕಿತ್ ಸವಿಯಾದ ಮೇವು!

ಕ್ಷಣ ಕ್ಷಣ ಹಪತಪಿಸಿತ್ ಮನ, ಕೇಳಿಕೆ ಶಾಂತಿನ ಗಾನ
ಒಂದೊಂದು ಹೆಜ್ಜೆಯಿರಿಸಿದೆ, ಮೌನದಿ ತಲುಪಲು ಆಂತರ್ಯದ ತಾಣ
ಇಳಿದಷ್ಟು ಮೆಟ್ಟಿಲು, ಘನಘೋರ ಕತ್ತಲು, ಸುತ್ತಮುತ್ತಲೂ..
ನಮ್ಮವರಾರು ಕಾಣರು, ತುಳುಕುತ್ತುಟ್ಟು ಸವಿಜೇನ ಬಟ್ಟಲ್
ತೂಗುತ್ತಲೇ ಬಣ್ಣದ ತೊಟ್ಟಿಲ್, ಅಶಾಂತಿನ ಹೊರಗಟ್ಟಲು
ನೆಲಮಾಳಿಗೆಯ ನೋಟ, ಸುಂದರ ಸುಮಗಳಿಂದಾವೃತ ತೋಟ

ಏಕತತ್ವ ಮೊಳಗಿಸಿತು ಶಾಂತಿಯ ಕಹಳೆಯೊಂದಿಗಿನ
ಲೀಲೆ ಬಹುಜನ್ಮದ ಸಾರವ ಬಿಚ್ಚಿ ಬರೆಯಿತು ಓಲೆ
ಕನ್ನಡಿಯೊಳಗಿನ ಕಂಡ ಪ್ರತಿಬಿಂಬ ಹೇಳುಟ್ಟು, ನೀನೊಂದು
ಗರುಡುಕಂಬ ನಿಂತಲ್ಲಿ ನಿಲ್ಲಲಾಗದೆ, ಕುಳಿತಲ್ಲಿ ಕುಳಿತಿರಲಾಗದೆ
ನಾನಾದೆ ಗೆದ್ದಲು ಹಿಡಿದ, ಮೇಲ್ನೋಟಕೆ, ಸ್ವರ್ಣ ಕವಚ ಕಂಬ
ಹೊರನೋಟ ಚೆಂದ, ಒಳನೋಟ ಅರ್ಥವಾಗದ ಮಹಾಪ್ರಬಂಧ

ಸೇವೆಯುರುಳಿಗೆ ಸಿಕ್ಕುವಾಗಲೇ ಮನಸ್ ಆತ್ ಉಕ್ಕು
ಬೇಡಿತ್ ಬದುಕುವ ಹಕ್ಕ್ ತಪ್ಪಿದರೂ, ದಶದಿಕ್ಕು
ಯಾರದೋ ಕಾಕದೃಷ್ಟಿ, ನಲುಗಿತ್ ಈ ಅಪೂರ್ವ ಸೃಷ್ಟಿ
ಸಮಷ್ಟಿಯ ಕತ್ತಲ ಹೀರಿ ಶಾಂತವಾಯಿತು ವ್ಯಷ್ಟಿ
ಇದ್ದಲ್ಲೇ ಇದ್ದರೇನಂತೆ? ಊರ ಹೊರಗಿನ ಸಂತೆ
ಅಂತರಂಗದ ವ್ಯಾಪಾರ ರಂಗುರಂಗಿನಲಿ ಸಾಕಾರ

ಕಾಮನ ಬಿಲ್ಲಿನ ಆಕಾರ, ಭುವಿಯಲ್ಲಿ ಝೇಂಕಾರ
ನನ್ನವಳ ಪ್ರಕಾರ, ಅದುವೇ ಶಕ್ತಿ ತುಂಬಿದ ಓಂಕಾರ
ಮುಳ್ಳೆಂಬ ಮಂಚದಲಿ, ಸುಳ್ಳಿನೊಳಗವಿತಿರುವ ಸತ್ಯವನ್ನೇ
ಲೇಖನಿಯಾಗಿಸಿ ಶಾಂತಿ, ಸಹನೆ, ಬವಣೆ ತೇಳೋ ಬರವಣಿಗೆನೇ
ಮೆರವಣಿಗೆಯಾಗಿಸಿ ಬೀಸಣಿಕೆಯ ಬೀಸುತ ನಾ ಕಲಾರಾಧಕಳಾದೆ ಭಾಗಿ
ಅಣುರೇಣು ತೃಣಕಾಷ್ಟದೊಟ್ಟಿಗೆ ಸಮಾನಳಾಗಿ ಮುಂದುಮುಂದಕೆ ಸಾಗಿ!!

# ನನ್ನೂರ್ನ ಮಳೆಗಾಲ

**–ಕೋಡಿ ನೀತು ಶಂಭು**

ಈಗಾಗಲೆ ಬೇಸಿಗೆಗಾ ಕಳ್ದ್ ಮಳೆಗಾಲ ಹಿಡ್ದುಟು, ಅಂದರೂ ಜೋರಾಗಿ ಮಳೆ ಹೊಡ್ಯಕುತಾದರೆ ಆರಿದ್ರ ಮಳೆ ಶುರು ಆಕು. ಆ ಮಳೆನು ಹೊಡ್ತ್ಲೆ ತೇಳ್ರೆ ತಲಕಾವೇರಿಲಿ ಮಳೆ ಬಾಕೆ ಒಂದ್ ಪೂಜೆ, ಆ ಮಳೆ ಎಲ್ಲಾರ್ ಜೋರಾಗಿ ಹೊಡ್ದ್ ಬುಟ್ರೆ ಮಳೆ ನಿಲ್ಲಿಕೆ ಒಂದ್ ಪೂಜೆ ಎಲ್ಲಾ ಮೆಲ್ಲಾಂಗೆ ಶುರು ಆದೆ. ಮಳೆಗಾಲ ಶುರು ಆತ್ ತೇಳ್ರೆ ಅಗೆ ಕೆಲ್ಸ, ನಾಟಿ ಕೆಲ್ಸ, ಯಾಲಕ್ಕಿ ಕೊಯ್ಯದು ಎಲ್ಲ ಒಮ್ಮೆಗೆ ಶುರಾದೆ. ಮಳೆಗಾಲಲಿ ಕಳ್ದ ದಿನಗಳ್ನೆಲ್ಲ ಒಂದ್ಸತಿ ಯೋಚನೆ ಮಾಡಿ ನೋಡ್ರೆ ಇನ್ಮುಂದೆ ಆ ದಿನಗ ಬಂದದೆನಾತ ಅನ್ಸಿದೆ.

ಮೃಗಶೀರ ಮಳೆ ಕಳ್ದ್ ನಾಳೆಂದ ಆರಿದ್ರ ಮಳೆ ತೇಳ್ಕನ "ದೇವ್ರೇ ಈವರ್ಸ ಆರಿದ್ರ ಮಳೆ ಜೋರಾಗಿ ಹೊಡ್ದ್ ಒಂದ್ ಹತ್ತ್ ಹದಿನೈದ್ ದಿನ ರಜೆ ಸಿಕ್ಕುವಂಗೆ ಮಾಡಪ್ಪ" ತೇಳಿ ದೇವರ ಫೋಟೋ ಮುಂದೆ ನಿತ್ಕಂಡ್ ಬೇಡಿಕಣ್ತಿದ್ದೊ. ಬೆಳ್ಗೆ ಎಚ್ಚರ ಆದಂಗೆ ಮಲ್ಗಿದ್ದ ಹಾಸಿಗೆಂದನೆ ಅಮ್ಮನ ಕರ್ದ್ " ಅಮ್ಮಾ ರಾತ್ರಿ ಮಳೆ ಇತ್ತಾತ" ಕೇಳ್ಕನ ಅಮ್ಮ ಏನಾರ್ ಮಳೆ ಜೋರಿತ್ತ್ ತೇಳ್ರೆ ಸಂಗಮ ಮತ್ತೆ ನಾಪೊಕ್ಲು ದಾರಿ ಮೇಲೆ ನೀರ್ ಇರ್ದುನಾತ ಕೇಳಿ ಹಾಸಿಗೆಲೆ ಒದ್ದಾಡಿ, ಕೊಣ್ದಾಡಿ ಇಂದ್ ರಜೆ ಇರ್ದುತ ಕುಶೀಲಿ ಎದ್ದ್ ಯಾವ್ದಕ್ಕೂ ಒಮ್ಮೆ ಹೊಟ್ಟೆ ಪ್ರಕಾಶ ಮಾವಂಗೆ ಫೋನ್ ಮಾಡಿ ಕೇಳ್ನೋ ತೇಳಿ ಕೇಳ್ಕನ ಅವು ರೋಡ್ ಮೇಲೆ ನೀರ್ ಇಲ್ಲೆ ತೇಳ್ರೆ ನಾವ್ಗೆ ಬರುವ ಸಿಟ್ಟ್!!! ಶಾಲೆಗೆ ಹೊರ್ಡ್ಕಾಕನ ಜೋರು ಮಳೆ ಬರ್ತಿದ್ದರೆ "ಸಾಯಲಿ ಅಣ್ಣ ಇಂದ್ ಶಾಲೆಗೆತ ಅಪ್ಪ ಅಮ್ಮ ಹೇಳ್ಕನ "ಬಿಲ್ಡಪ್" ಗೆ ಬ್ಯಾಡಮ್ಮ ಮಳೆ ಕಡ್ಮೆ ಆದು ಕಂಡದೆ ತೇಳಿ ಶಾಲೆಗೆ ಚಕ್ಕರ್ ಹೊಡ್ಯದು. ಶಾಲೆಂದ ವಾಪಾಸ್ ಮನೆಗೆ ಹೋಕನ ಬೆಳ್ಗೆ ಪಾಂಡಿ ಬರೆ ಹತ್ರ ನೋಡಾಟ್ಟ ಹೆಗ್ಗಳಂಬು ಇದ್ದರೆ ಕಿತ್ಕಂಡ್ ಹಂಗೆ ನಿಗುಳ ಗುಂಡಿ ದಾಟಿ ಮುಂದೆ ಗದ್ದೆ ಪುಣಿಲಿ ನಡ್ಕಂಡ್ ಹೋಕನ ಚಿಂತು ಎಲ್ಲಾರ್ ಅತ್ತ ಇತ್ತ ನೋಡಿ ರೈನ್‌ಕೋಟ್ ಹಾಕಂಡ್ ಗದ್ದೆ ಒಳಗೆ ಕಾಲ್ ಹಾಕಿ ಬಿದ್ದರೆ ಅವಂಗೆ ಕೈಕೊಟ್ಟ್ ಅವನ ಏಳ್ಸಿ ಮುಂದೆ ಹೋಕನ ಗೊರ್ಗ್ ಹಾಕಂಡ್ ಅಗೆ ತೆಗೆಯವ್ಕೆ ನಾಟಿ ನಡವ್ಕೆ ಹಾಯ್ ಬಾಯ್ ಹೇಳ್ಕಂಡ್ ಹೋಕನ ದೊಡ್ಡಮನೆಂದ ಮೇಲೆ ಗದ್ದೆ ಪುಣಿಲಿ ಜೋರಾಗಿ ಬೀಸ್ ಗಾಳಿತ ಬೇಡಿಕಂಡ್ ಜೋರಾಗಿ ಮಳೆ ಬಾಕನ.



"ಜೋರಾಗಿ ಮಳೆ ಬಾತ್ ಹಡ್ಲ್ ಗದ್ದೆಲಿ ನೀರಾತ್ ಕುಞಣ್ಣ ಹೊರ್ಟತ್ ಹೂಡಿಕೆ ಕರಿ ಕೋಣ ಬಿಳಿ ಕೋಣ ಹೊಡ್ಕಂಡ್.. ಕುಞಕ್ಕ ಬಾತ್ ಒಣಗಿಲ್ ರೊಟ್ಟಿ ಹಲ್ಸನಕ್ಕಿ ಪೊಜ್ಜಿ ತಕಂಡ್" ತೇಳಿ ಜೋರಾಗಿ ಹಾಡ್ ಹೇಳಿಕಂಡ್ ಬಿಡಾರ ತೋಡ್ ದಾಟಿಕಂಡ್ ಮರ್ಯಪ್ಪನ ಮನೆ ಹತ್ರ ಹೋಕನ ಜೋರಾಗಿ ಕೂಗ್ಹಾಕಿ ಅಲ್ಲಿ "ಓ ಅಣ್ಣಂದ್ರೆ ಬನ್ನಿ ಒಂದೊಂದು ಚಾಯ ಕುಡ್ಕಂಡ್ ಹೋಗಿತ ಮರ್ಯಪ್ಪನ ಕರ್ದರೆ ಮತ್ತೆ ಬಂದವೆ ತೇಳಿಕಂಡ್ ಸಾಬಣ್ಣಂಗೊಂದು ಕೂಗ್ಹಾಕಿ ನಮ್ಮ ಮನೆ ಅಂಗಳಕ್ಕೆ ಹೋಕೆ ಮುಂದೆ "ಅಮ್ಮಾ ಉಂಬುಳು" ತೇಳಿ ಕರ್ದರೆ ಮನೆ ಒಳಗೆಂದ ಎಲ್ಲವ್ ಓಡಿ ಬಂದ್ ಕಾಲ್‌ಂದ ಚಪ್ಪಲ್ತೆಗ್ದ್ ನೋಡ್ರೆ ನಾಲ್ಕೈದ್ ಉಂಬುಳುಗ ಹಣ್ಣಾಗಿರ್ತಿದ್ದೊ. ಮತ್ತೆ ಒಳಗೆ ಹೋಗಿ ಬೆಂಕಿ ಬುಡಲಿ ಮೇಲೆಮನೆ ಬಾಯಪ್ಪಜ್ಜನಂಗೆ ಕರೊ ಕಾಫಿ ಕುಡ್ಕಂಡ್ ಕುದ್ದ್ ಹಂಞ ಹೊತ್ತುಲಿ ಬೆಚ್ಚಂಗೆ ಮೀಂದ್ ಒಳಗೆ ಬಂದ್ ಸರ್ಯಾಗಿ 7:45 ಕ್ಕೆ ಸುದ್ದಿ ಜೊಂಪೆಲಿ ನಾಳೆನ ರಜೆ ವಿಷಯ ಏನಾರ್ ಹೇಳ್ದನಾಂತ ಕಾದ್ಕಂಡ್ ಕೂರ್ತಿದ್ದೊ. ಅದ್ ಹೇಳದಿದ್ದರೆ ಮಲ್ಗಿ ಬೆಳ್ಗೆದ್ದ್ ರಾತ್ರಿ ಜೋರ್ ಮಳೆತಾದರೆ ನಾವೇ ಶಾಲೆಗೆ ರಜೆ ಮಾಡ್ಕಂಡ್ ಮಾರ್ನೆ ದಿನ ಶಾಲೆಗೆ ಹೋಕನ "Why you was absent yesterday" ತ ಕೇಳ್ಕನ "miss because of heavy rain" ತ ಹೇಳಿ ಹೆಂಗೋ ಜಾರಿಕಂಡ್ ಎಂದಿನಂಗೆ ಮನೆಗೆ ಬಂದ್ ಸೇರ್ಕಣ್ತಾ ಇದ್ದೊ. ಮಾರ್ನೆ ದಿನ ಜೋರ್ ಮಳೆ ಇದ್ದ್ ರಜೆ ಕೊಟ್ಟತ್ಲೆ ತೇಳಿ ಆದರೆ ಸುರುಗೆ ಮಿಸ್‌ಗೆ ಒಂದ್ ಫೋನ್ ಮಾಡಿ "Miss today there is holiday or not"ತ ಬಟ್ಲರ್ ಇಂಗ್ಲಿಷ್ ಮಾತಾಡಿ ಅವು "Today no holiday" ತೇಳ್ರೆ ಡೀ.ಸಿ ಗೆ ಬೈಕಂಡ್ ಶಾಪ ಹಾಕಂಡ್ ಶಾಲೆಗೆ ಹೋಕಂಡ್ರ್ಕನ ನಡ್ದ ನೆನ್ಪುಗ.

ಇನ್ನ್ ಮಳೆಗಾಲಲಿ ಮನೆಕಡೆ ಇರ್ತಿದ್ದ ಮಜಾನೆ ಬೇರೆ. ನಾಳೆ ಅಗೆ, ನಾಟಿ ತೇಳ್ಕನ ರಾತ್ರಿ ಬೆನ್ನರ್ಕಾಡೌಕೆ ಫೋನ್ ಮಾಡಿ ಕರಿತಿದ್ದೊ, ಅಗೆಲಿ ಹೆಣ್ಣ್ ಜನ್ರ ಶೋಭಾನೆ ಹಾಡುಗ, ನಾಟಿಲಿ ಗಂಡಸರ ವರ್ಲಡ್ ಫೇಮಸ್ ಜೋಕ್ಸ್‌ಗ ಅಗೆಯವ್ಕೆ ಕೋಳಿಗೈಪು, ಪುಂಡಿ, ಹಂಗೆ ಅದರೊಟ್ಟಿಗೆ ಮಳೆಲಿ ಚಳಿ ಆಗದಂಗೆ ನೈಂಟಿ ಪೆಗ್ಗ್‌ನು. ನಾಟಿ ಮಾಡಿಕಂಡ್ ಮಾತಾಡಿಕಂಡ್ ನಾಟಿ ಮಾಡ್ಕಾಕನ ಸಾಬಣ್ಣನಂಗೆ ಕೆಸ್ರ ಗದ್ದೆ ಒಳಗೆ ಮುಂಗುರ್ಸಿ ಬೀಳದಾಂಗೆ 3 ಗಂಟೆಗೊಂದು ಚಾಯ. ಇನ್ನ್ ಓಟ್ ಗದ್ದೆ ನಾಟಿ ದಿನ ಓಟು ನೋಡಿಕೆ ಎಲ್ಲವ್ ಬಾಕನ ಹೆಣ್ಣ್ ಜನರ ಮುಂದೆ ಪ್ಯಾಂಟ್ ಬಿಚ್ಚಿ ಓಡಿಕೆ ನಾಚಿಕೆ ಆಗಿ ವಿನಣ್ಣ ಪ್ಯಾಂಟ್ ಹಾಕಂಡೇ ಚುಳ್ಳಿ ಓಡಿಬುಟ್ಟಿದ್ದೊ. ಮಳೆ ಬಂದ್ ಹೊಳೆಲಿ ನೀರ್ ಜಾಸ್ತಿ ಆಗಿ ಪೈಪುಲಿ ನೀರ್ ಬಾರದಿದ್ದರೆ ಪೈಪೇ ಕೊಚ್ಚಿಕಂಡ್ ಹೋತ್ ಕಂಡದೆತ ತಲೆಬಿಸಿ ಮಾಡ್ಕಂಡ್ ಗೊರ್ಗ್ ಹಾಕಂಡ್ ಸಂಬಣ್ಣ, ಜಪ್ಪಣ್ಣ, ಜಿತ್ತಣ್ಣ ಹೊಳೆಗೆ ಪೈಪ್ ನೋಡಿಗೆ ಹೋಕನ ಹಿಂದೆಂದ ಕೊಡೆ ಹಿಡ್ಕಂಡ್ ಮಿಟ್ಟಪ್ಪ, ಹೆಂಗೋ ಎಲ್ಲಾ ಸೇರಿಕಂಡ್ ನೀರ್ ಬುಡ್ಕಂಡ್ ಬರ್ತಿದ್ದೊ. ರಾತ್ರಿ ಮಳೆ ಜೋರು ಹೊಡ್ದರೆ ಬೆಳ್ಗೆದ್ದಾಂಗೆ ಏಕಲ ಗದ್ದೆಲಿ ಮೀನ್ ಹತ್ತಿಟಾತ ನೋಡಿಕೆ ಓಡ್ದು, ಮೀನ್ ಹಿಡಿಯಕನ ಮೀನ್ ಮುಗ್ಗ ಜಪ್ಪಣ್ಣ, ಕುಮಾರಣ್ಣ, ಸಂಬಣ್ಣ, ಮಿಟ್ಟಪ್ಪಣ್ಣ ಹಿಂದೆಂದ ನಮ್ಮದು ಸೈಡ್ಲಿ ಹಂಞ ಇರ್ಲಿತ ಜಿತ್ತು, ನೀತು, ಚಿಂತು ತೇಳಿ ಹಿಡ್ದ್ ಸಾಯಂಕಾಲ ಆಕನ ಚೆಟ್ಟಿ ತುಂಬುತ್ತಿತ್ತ್, ಮೀನ್‌ಗಳ್ನ ಹಿಡ್ದ್ ಗದ್ದೆಲಿ ಮೀನ್ ಗ ಕಾಲಿ ಆಕನ ಮೆಲ್ಲಾಂಗೆ ಹಾಡ್ಡೇಳಿಕಂಡ್ ಮೂಗಿಗೆ ನೆಸೆ ಬುಡ್ಕಂಡ್ ಮರ್ಯಪ್ಪ ಬರ್ತಿದ್ದೊ. ಆಗ ನಾವೆಲ್ಲ "ಡೊಂಕು ಕಾಲ್ನ.. ಸುರು ಸುರು ಮೂಗುನ ಮರ್ಯಪ್ಪ ಬಾತ್" ತ ಹೇಳ್ತಿದ್ದೊ. ಅದೆಲ್ಲ ಬುಡಿ, ಸಾಯಂಕಾಲ ಆಕನ ನಮ್ಮ ಪಟ್ಟದಾರರಾದ ಮೇಲೆ ತಾತ ಚಳಿ ಆಗದಾಂಗೆ ಗಡ್ಡದಡಿಗೆ ಟೊಪ್ಪಿ ಹಾಕಿ ಕಾಲ್‌ಗೆ ಸಾಕ್ಸ್ ಹಾಕಿ, ಹೊಗೆಸೊಪ್ಪುನ ಪೇಪರೊಳಗೆ ಸುರ್ಟಿ ಕಿಚ್ಚಿ ಕೊಡ್ಕಂಡ್ ರಜನಿಕಾಂತ್ ಸ್ಟೈಲ್‌ಲಿ ಹೊಗೆ ಬುಡ್ತಿದ್ದೊ. ಕೈಲ್ಮುಹೂರ್ತ ಅಂತು ಹೇಳಿ ಸುಖ ಇಲ್ಲೆ, ಹೆಂಗೂ ಮಳೆಗಾಲನ ಮಾತ್ರ ಮಜಾ ಮಾಡಿಕಂಡ್ ಕಳಿತಿದ್ದೊ. ಇದೆಲ್ಲ ಮರ್ಯಕಾಲೆ, ನೀವ್ ಕೂಡ ನಿಮ್ಮ ಲಾಯ್ಕನ ನೆನ್ಪುಗಳ್ನ ಯೋಚನೆ ಮಾಡಿಕಂಡ್ ಕುಶಿಪಟ್ಕಣಿ... ಕಂಡ್ಕಂಬೊನೊ ಅಲ.

# ಕಾವೇರಿ ಹೋಂ ಅಪ್ಲೈಯೆನ್ಸಸ್

ಕುಕ್ಕರ್ಸ್



ಮಿಕ್ಸರ್ ಗ್ರೈಂಡರ್ಸ್



ಗ್ಯಾಸ್ ಸ್ಟೌವ್



ಕುಕ್‌ವೇರ್ಸ್



ಸ್ಮಾಲ್ ಅಪ್ಲೈಯೆನ್ಸಸ್



ಸಂಪರ್ಕಿಸಿ :

**ಚೀಯಪ್ಪನ ನವೀನ್ / ಚೀಯಪ್ಪನ ಶರತ್**

ದೂರವಾಣಿ ಸಂಖ್ಯೆ: +91–8884571075 / +91–8861833243 /080–41228359

Email Id: homeappliances.kaveri@gmail.com

#23/8, ಚಾಮುಂಡೇಶ್ವರಿ ಕಾಂಪ್ಲೆಕ್ಸ್, ಚಾಮುಂಡೇಶ್ವರಿ ಲೇಔಟ್, ಶಾಂತಿನಿಕೇತನ್ ಮುಖ್ಯ ರಸ್ತೆ,
ನಿರಂಜನ್ ಮ್ಯಾಕ್ಸಿಮಾ ಅಪಾರ್ಟ್‌ಮೆಂಟ್ ಎದುರು, ಬಿ.ಜಿ. ರಸ್ತೆ, ಅರೆಕೆರೆ, ಬೆಂಗಳೂರು–560076

* ಅರೆಬಾಸೆ ಮುಡ್ಪು ಪತ್ರಿಕೆನ ಚಂದಾ ಹಣನ ಇಲ್ಲಿ ಸ್ವೀಕರಿಸಲಾದೆ.

---

ನೀವ್ಗೆ ನಿಮ್ಮ ಹಳೆ ಕಾರ್ ಓಡ್ಸಿ ಓಡ್ಸಿ ಸಾಕಾಗುಟ್ಟ? ಬೇರೆ ಕಾರ್ ತಕಣಿಕೆ ಹೊರ್ಟೊಳರಿನ? ಹಳೆ ಕಾರ್‌ನ ಮಾರೊಕ?..
ಹಂಗಿದ್ದರೆ ತಡ ಯಾಕೆ..? ಎಲ್ಲ ಕಂಪನಿಯ ಹಳೆ ಕಾರ್‌ಗಳ ಖರೀದಿ ಮತ್ತೆ ಮಾರಾಟ...

**ಸಂಪರ್ಕಿಸಿ: ತರುಣ್ ಕೂಡಕಂಡಿ**

**8105072097**

**tharungowda6@gmail.com**











* Design for permanent Irrigation Pipelines
* One time Investment * Easy to operate
* We supply your requirement




# ವಸಂತ್ ಟ್ರೇಡರ್ಸ್

ಬೈಪಾಸ್ ರಸ್ತೆ, ವೆಂಕಟಪ್ಪ ಬಡಾವಣೆ, ಗೋಣಿಕೊಪ್ಪಲು, ದ.ಕೊಡಗು 571 123

Contact : 08274-247661 Mob : 94487 95589, 94485 87968

ಶಾಖೆ : ಕಕ್ಕೆಹೊಳೆ, ಸೋಮವಾರಪೇಟ್ – 8904145443 E-mail : vasanthtradersgkl@gmail.com

## ನನ್ನ ಕರ್ನಾಟಕ ಅರ್ಪಿಸುವ ಸಿಗ್ಮಾ ಸ್ಪಿರುಲಿನಾ




ಸ್ಪಿರುಲಿನ ಎಂಬುದು ನೀರಿನಲ್ಲಿ ಬೆಳೆಯುವ ಪಾಚಿಯ ತರಹದ ಒಂದು ಸಸ್ಯ. ಇದು ಬರೋಬ್ಬರಿ ನೂರರಷ್ಟು ಪೌಷ್ಠಿಕಾಂಶಗಳಿಂದ ಕೂಡಿದ್ದ ಸಮಗ್ರವಾದ ನೈಸರ್ಗಿಕ ಆಹಾರ. ಒಬ್ಬ ಮನುಷ್ಯ ಆರೋಗ್ಯವಂತನಾಗಿರಲು ಏನೇನು ಬೇಕು ಆ ಎಲ್ಲಾ ಪೌಷ್ಠಿಕಾಂಶಗಳನ್ನು ಒದಗಿಸುವ ಏಕೈಕ ಆಹಾರ. ಇದಕ್ಕೆ ವಿಶ್ವಸಂಸ್ಥೆಯು 1974 ರಲ್ಲಿ ಇದಕ್ಕೆ ಮಾನ್ಯತೆ ನೀಡಿ ತಾಯಿಯ ಎದೆಹಾಲಿನ ನಂತರದ ಸ್ಥಾನ ನೀಡಿದ್ದಾರೆ.







- ✦ ಮಕ್ಕಳಲ್ಲಿ ಬುದ್ಧಿಶಕ್ತಿ ಹೆಚ್ಚಳ ಹಾಗು ರೋಗ ನಿರೋಧಕ ಶಕ್ತಿ ಹೆಚ್ಚಿಸುತ್ತದೆ.
- ✦ ಮಕ್ಕಳಿಗೆ ಉತ್ತಮ ಪ್ರೋಟೀನ್ ಒದಗಿಸುವ ಆಹಾರ
- ✦ ಇದರಲ್ಲಿ ಕಬ್ಬಿಣದ ಅಂಶ ಹೇರಳವಾಗಿದ್ದು ಹಿಮೋಗ್ಲೋಬಿನ್ ಪ್ರಮಾಣವನ್ನು ಹೆಚ್ಚಿಸುತ್ತದೆ.
- ✦ ಮಕ್ಕಳಲ್ಲಿ ಕಾಣುವ ಕಣ್ಣಿನ ಹಲವು ರೋಗಗಳನ್ನು ತಡೆಯುವಲ್ಲಿ ಉಪಯುಕ್ತ
- ✦ ರಕ್ತಹೀನತೆಯಿಂದ ಬಳಲುವ ಮಹಿಳೆಯರಿಗೆ ತುಂಬ ಉಪಯುಕ್ತ
- ✦ ರಕ್ತದಲ್ಲಿ ಕೊಬ್ಬಿನಾಂಶ ಕರಗಿಸಲು ಉಪಯುಕ್ತ
- ✦ ಕ್ಯಾನ್ಸರ್ತಡೆಯಲು ಉಪಯುಕ್ತ

ಅಮೆಜಾನ್.ಕಾಮ್ ಲಿ ಸ ಲಭ್ಯ

ವೆಂಕಟಪ್ಪ ಲೇಔಟ್, ಪ್ರಕ್ರುತಿ ಕ್ರಾಸ್, ಲಕ್ಷ್ಮೀ ದೇವಸ್ಥಾನದ ಹತ್ತಿರ,
ಕೇತಿಗಾನಹಳ್ಳಿ ರಸ್ತೆ, ಬಿಡದಿ, ಬೆಂಗಳೂರು–562 109

Mob : 9480954342 / 9739869090 / 9481826387
nannakarnataka1@gmail.com | www.nannakarnataka.com